

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರಾ ಸಂದರ್ಭದಲ್ಲಿ ಏರ್ಪಡಿಸಿದ್ದ ವಸ್ತುಪ್ರದರ್ಶನದ ಉದ್ಘಾಟನಾ ಸಮಾರಂಭದಲ್ಲಿ ಕರ್ನಾಟಕ ರಾಜ್ಯ ಲೋಕೋಪಯೋಗಿ ಸಚಿವರಾಗಿದ್ದ ಶ್ರೀ ಎಂ. ಚಂದ್ರಶೇಖರ್, ಪೂಜ್ಯ ಶ್ರೀ ಶ್ರೀ ಗಳವರು, ಬಂದೀಖಾನೆ ಇಲಾಖಾ ರಾಜ್ಯ ಸಚಿವರಾಗಿದ್ದ ಸಾಗರನಹಳ್ಳಿ ಶ್ರೀ ರೇವಣ್ಣನವರು ಹಾಗೂ ಶ್ರೀ ಗೌರಿಶಂಕರ ಸ್ವಾಮಿಗಳು ಭಾಗವಹಿಸಿದ್ದರು.



ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳು, ಪರಮ ಪೂಜ್ಯ ಶ್ರೀ ಶ್ರೀ ಗಳವರು ಹಾಗೂ ತುಮಕೂರು ಲೋಕಸಭಾ ಸದಸ್ಯರಾದ ಸನ್ಮಾನ್ಯ ಶ್ರೀ ಜಿ ಎಸ್. ಬಸವರಾಜು ಅವರುಗಳು ಭಾಗವಹಿಸಿದ್ದರು.

# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೪ ಏಪ್ರಿಲ್, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಅಮಿತ ತೇಜೋ ರಾಶಿ, ಕಾಯಕ ಪುರುಷ, ಜಗ
ನಮಿತ ಕಾರಣಿಕಪುರುಷ, ಉದ್ದಾನಯೋಗಿ।
ತಮಕೆ ತರಣಿಯ ತೆರದಿ ಆಗಮಿಸೆ ನಿನ್ನ ಜಗ
ಆಮಮ ವರ್ಧಿಸಿತಂದು ನೂರು ಮಹಿಮಾಗಿ॥

*   *   *

ವಯೋಗ ಸಿದ್ಧನಿಗೆ ಸಾಧ್ಯವಾಗದುದುಂಟೆ
ಅವನಿಯಲಿ? ಉದ್ದಾನ ಶಿವಯೋಗಿಯು।
ಶಿವ ಭಾವದೊಡನೆಯೆ ಹಿಡಿದ ಕಾರ್ಯಗಳೆಲ್ಲ
ಸವಿ ಫಲವ ನೀಡಿದವು ಹುಲುಸಾಗಿಯು॥

*   *   *

ದಾಸೋಹ, ಸರ್ವಮತ ವಿದ್ಯಾರ್ಥಿ ನಿಲಯವು
ಲೇಸಾದ ಜಾತ್ರೆ, ಪಶು ಪರಿಷೆ ಮೊದಲಾಗಿ।
ಸಾಸಿರದ ಸಂಖ್ಯೆಯಲಿ ಸರ್ವರು ದಯದ ಕಾರ್ಯ
ರಾಶಿ ಪೂರೈಸಿದುವು ಅದ್ಭುತಗಳಾಗಿ॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ

ಲೇಖನದ ಹೆಸರು | ಲೇಖಕರ ಹೆಸರು | ಪುಟ



# ಶ್ರೀವಾಣಿ

ಮಹಾಪುರುಷರ ಜಯಂತಿಯನ್ನು ಆಚರಿಸುವುದು, ಅವರಿಗೆ ದೊಡ್ಡಸ್ತಿಕೆಯನ್ನುಂಟುಮಾಡುವುದಕ್ಕಲ್ಲ. ಪರಂತು ನಮ್ಮ ಜೀವನದ ಸಾಫಲ್ಯಕ್ಕಾಗಿ; ಅರ್ಥಾತ್ ನಾವು ನಿಜವಾದ ಬೆಳಕನ್ನು ಕಾಣುವ ಸಲುವಾಗಿ, ಅಂತೆಯೇ ಬಿಜ್ಜಳನ ಪ್ರಧಾನಿಯಾಗಿದ್ದರೆಂದ ಮಾತ್ರಕ್ಕೆ ಬಸವಣ್ಣನವರಜಯಂತ್ಯುತ್ಸವ ಮಾಡಬೇಕಾಗಿಲ್ಲ. ಅಥವಾ ದಿನಂಪ್ರತಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮರ ದಾಸೋಹ ನಡೆಸುತ್ತಿದ ಮಹಾಮೂರ್ತಿಯೆಂದೂ ಅಲ್ಲ. ಕಾರಣ ಬಸವಣ್ಣನವರು ವಿಶ್ವದ ಎಲ್ಲಾ ದೀನ ದಲಿತರ ಸಲುವಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟುದುದರಿಂದ ಮಾತ್ರ.

ಬಸವಣ್ಣನವರು ಮಹಾ ಅವತಾರ ಪುರುಷರು. ಅವರ ಜೀವನಚರಿತ್ರೆಯ ವಿಷಯದಲ್ಲಿಹರಿಹರ, ಪಾಲ್ಕುರಿಕೆ ಸೋಮನಾಥ, ಸಿಂಗಿರಾಜ, ಭೀಮಕವಿ ಮುಂತಾದ ಕವಿಗಳು ಮಹಾಕಾವ್ಯಗಳನ್ನೇ ರಚಿಸಿರುತ್ತಾರೆ. ಅದೇನೇ ಇರಲಿ, ಭೂಲೋಕದ ಅಧರ್ಮ ನಿವೃತ್ತಿ, ಧರ್ಮ ಪ್ರವೃತ್ತಿಗಳ ಸಲುವಾಗಿ ಈ ಮಹಾನುಭಾವರು ಶ್ರೇಷ್ಠವರ್ಗದ ಸಮಾಜಸುಧಾರಕರಾಗಿ, ನೂತನರೀತಿಯ ಸಾಹಿತ್ಯ ರಚನಾಕಾರರಾಗಿ ಅನುಭವ ಮಂಟಪದ ಸಂಸ್ಥಾಪಕರಾಗಿ — ಹೀಗೆ ಅವರು ವಿವಿಧ ರೀತಿಯಲ್ಲಿ ಮಾನವಕೋಟಿಗೆ ಮಹಾನ್ ಸೇವೆಯನ್ನು ಸಲ್ಲಿಸಿದ್ದಾರೆ. ತಮ್ಮಕಾಲೀನ ಜನಜಾಗೃತಿಯನ್ನುಂಟುಮಾಡಿದ್ದಾರೆ. ಅಷ್ಟಕ್ಕಲ್ಲದೆ ಶ್ರಮಜೀವನಕ್ಕೆ ಅತಿಮಹತ್ವದ ಬೆಲೆಕೊಟ್ಟು ಕಾಯಕದ ಯಥಾರ್ಥ ತೋರಿಸಿಕೊಟ್ಟಿದ್ದಾರೆ. ಈ ಆದರ್ಶದ ಆಚರಣೆಯೇ ಜಯಂತಿ ಉತ್ಸವದ ಸಾರ್ಥಕತೆ.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ


## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಆಜೀವ ಸದಸ್ಯತ್ವ 201-00 ರೂ

1985 ನೇ ಜನವರಿಯಿಂದ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ಬಸವ ಜಯಂತಿ

ಬಸವಣ್ಣ ಈ ಜಗತ್ತು ಕಂಡ ಮಹಾ ಮಾನವತಾವಾದಿ. ವಿಚಾರಶೀಲ, ಕ್ರಿಯಾವಂತ, ಸಂಪ್ರದಾಯ ವಿರೋಧಿ, ಪರಂಪರೆಯ ನಿರ್ಮಾಪಕ, ನಿರ್ಭೀತ ಮನೋಧರ್ಮಿ, ನಿಸ್ಸೀಮ ವ್ಯಕ್ತಿತ್ವ ಆತನದ್ದು. ಆತ ಹುಟ್ಟಿದ್ದು ವೈಶಾಖ ಶುದ್ಧ ತದಿಗೆ ರೋಹಿಣಿ ನಕ್ಷತ್ರದಲ್ಲಿ. ಈ ವರ್ಷ ಅದು 23-4-85ರ ಶನಿವಾರ ಆ ಪುಣ್ಯ ದಿನ. ಅಂದು ಬಸವಣ್ಣನ ಜಯಂತಿ. ಕರ್ನಾಟಕ ಸರ್ಕಾರ ಅಂದು ರಜಾ ಘೋಷಿಸಿ ಆತನನ್ನು ಗೌರವಿಸಿದೆ. ಬಸವ ಪ್ರೇಮಿಗಳಿಗೆ ಅಂದು ಹಬ್ಬ. ಜಯಂತಿಯ ಉದ್ದೇಶ ಮಹಾಪುರುಷರ ಸ್ಮರಣೆ. ಆದರ್ಶಗಳ ಪಾಲನೆ ಬದುಕನ್ನು ಹಸನು ಮಾಡಿಕೊಳ್ಳಬೇಕೆಂಬ ಸಂಕಲ್ಪಕ್ಕೆ ದೀಕ್ಷೆ ಕೊಡುವ ದಿನ.

ಬಸವಣ್ಣ ದೇವರಲ್ಲ. ದೇವರೆಂದು ಭಾವಿಸಿದರೆ ತಪ್ಪಲ್ಲ. ಅವನು ಪವಾಡ ಪುರುಷನಲ್ಲ. ಪವಾಡಗಳಿಂದ ಯಾರೂ ದೊಡ್ಡವರಾಗುವುದಿಲ್ಲ. ಬದಲಾಗಿ ಪವಾಡ ಮಾಡಿ ಸಣ್ಣವರೇ ಆಗುತ್ತಾರೆ. "ಬಸವಣ್ಣನವರು ದೊಡ್ಡವರಾದದ್ದು ಅವರು ನಂದಿಯ ಅವತಾರವೆಂದಲ್ಲ; ಬಿಜ್ಜಳನ ಭಂಡಾರವನ್ನು ತನಿಖೆ ಮಾಡಿದ ದಿನ. ಎಲ್ಲವೂ ಲೆಕ್ಕಾಚಾರಕ್ಕೆ ಹೊಂದಿಕೊಳ್ಳುವಂತೆ ಮಾಡಿದ್ದರಿಂದ ಅಲ್ಲ. ಅವರು ದೊಡ್ಡವರಾದದ್ದು ಮನುಷ್ಯರಾಗಿ, ಸುತ್ತಣ ಪರಿಸರದ ಜೊತೆ ಹೋರಾಡಿ ಅದನ್ನು ಗೆಲ್ಲಲು ಪ್ರಯತ್ನಿಸಿ ಅದರಿಂದ ಮೇಲಕ್ಕೆ ಏರಿದ್ದರಿಂದ, ಬಿಜ್ಜಳನ ಭಂಡಾರದ ಪಕ್ಕದಲ್ಲೇ ಇದ್ದರೂ, ತಾವು ಅದಕ್ಕೆ ಅಧಿಕಾರಿಯಾಗಿದ್ದರೂ ಅದರಲ್ಲಿ ಚಿಕ್ಕಾಸನ್ನೂ ಮುಟ್ಟದ ಪ್ರಾಮಾಣಿಕರಾದ್ದರಿಂದ. ನಾವು ವ್ಯಕ್ತಿಗಳನ್ನು ಪವಾಡಗಳಿಂದ ಪಾರುಮಾಡಿ ಅವರನ್ನು ಮನುಷ್ಯತ್ವದ ಹಿನ್ನೆಲೆಯಲ್ಲಿ ಮಾತ್ರ ನೋಡಿ ಅವರ ಮಾನವೀಯತೆಗಾಗಿ ಅವರನ್ನು ಗೌರವಿಸುವುದನ್ನು ಕಲಿಯಬೇಕಾಗಿದೆ."

ಬಸವಣ್ಣನವರ ಜನನದಿಂದ ಭರತಖಂಡ ಒಂದು ಹೊಸ ಬೆಳಕನ್ನು ಕಂಡುಕೊಂಡಿತು. ಮನುಕುಲದ ಮಾಂಗಲ್ಯವಾಗಿ ಬಂದ ಆ ಮಹಾನುಭಾವನಿಂದಾಗಿ ಜಾತಿ, ಕರ್ಮ, ಮೂಢನಂಬಿಕೆಗಳಂಥ ಅಜ್ಞಾನದಲ್ಲಿ ತೊಳಲುತ್ತಿದ್ದ ಸಹಸ್ರ ಸಹಸ್ರ ಜನ ಬಸವಣ್ಣನ ಮಾರ್ಗದಲ್ಲಿ ನಡೆಯುವಂತಾಯಿತು. ಅಗಸ, ಬಡಗಿ, ಚಮ್ಮಾರ, ಡೋಹರ, ಮಾದರ, ಹೊಲೆಯ, ಬೇಡ, ಬೆಸ್ತ, ಅಂಬಿಗ, ಸೂಳೆ ಮುಂತಾಗಿ ತುಳಿತಕ್ಕೆ ಸಿಕ್ಕಿದವರಿಗೆ ಸಮಾಜದಲ್ಲಿ ಸ್ಥಾನ–ಮಾನ ಸಿಕ್ಕುವಂತಾಯಿತು. ಮಾತಿಲ್ಲದವರಿಗೆ ಮಾತು ಬಂತು. ದಲಿತರಿಗೆ ದನಿಯಾದ.

ಬಸವಣ್ಣ ಬೆಳಕಿನ ಕಲಶ ಬೆಲ್ಲದ ಹಿಟ್ಟು: ಬಾಳೆಯ ದಿಂಡು. ಆತನದು ಮಧುರವಾಣಿ, ಮೃದುವಾದ ನಡೆ. ಅವನ ವಚನಗಳು ಅದನ್ನು ಹೇಳುತ್ತಿವೆ. ಆತ್ಮೀಯ ಭಾವ, ಅಪ್ಪಿಕೊಳ್ಳುವಷ್ಟು ಆನಂದ ಅವುಗಳ ಅಧ್ಯಯನ ಮಾಡಿದಾಗ. ಬಸವಣ್ಣ ಜಗತ್ತಿಗೆ ಕೊಟ್ಟದ್ದು ಸಾರ್ವಕಾಲಿಕ, ಸಾರ್ವತ್ರಿಕವೆಂಬಂಥ ದಿವ್ಯ ಮಂತ್ರ. ಅದು ಕಾಯಕ, ಮತ್ತೊಂದು ದಾಸೋಹ. ವೈಜ್ಞಾನಿಕ ಚಿಂತನೆಯ ಮುಕ್ತ ಫಲ; "Production and Distribution" ಹಾಗೆ ಮಾಡಿದವರಿಲ್ಲ. ಇಂದೂ ಇಲ್ಲ. ರಾಷ್ಟ್ರದ ಸಮಸ್ಯೆಗಳ ಪರಿಹಾರಕ್ಕೆ We must go back to Basava.

ಬಸವಣ್ಣ ಲೋಕಜೀವನಕ್ಕೆ ಬೆಳಕಿನ ತಿಲಕವಿಟ್ಟ. ಎಂದೆಂದೂ ಹೊಳೆಯುವಂತೆ ಸಿಂಗರಿಸಿದ. ಮರ್ತ್ಯವನ್ನು ತುಂಬು ಗೌರವದಿಂದ ನೋಡಿದ. ಇಲ್ಲಿ ಸಲ್ಲುವುದನ್ನೂ ಹೇಳಿಕೊಟ್ಟ. ಪಾಪ ಮಾಡಿದವನಿಗೂ ಉದ್ಧಾರವಿದೆಯೆಂದ. ತಾವು ಜೀವಿಸಿದ್ದ ಅವಧಿಯಲ್ಲಿಯೇ ಅಸಂಖ್ಯಾತ ಜ್ಞಾನಿಗಳಿಂದ ಗೌರವಾದರಗಳಿಗೆ ಪಾತ್ರನಾದ. ಅಸಂಖ್ಯಾತರನ್ನು ಬೆಳಕಿಗೆ ತಂದ. ಅವರ ಉದ್ಧಾರದಲ್ಲಿ ತನ್ನ ಏಳ್ಗೆಯನ್ನೇ ಕಂಡು ನಲಿದ. ಎನಗಿಂತ ಕಿರಿಯರಿಲ್ಲವೆಂದು ವಿನಯದ ಬೆಲೆಯನ್ನು ಹೆಚ್ಚುಮಾಡಿದ. ಅಂಥವನಿಂದ ಕರ್ನಾಟಕಕ್ಕೆ ಬೆಲೆ ಬಂದಿತು. ಆದರೆ ಕರ್ನಾಟಕದಲ್ಲಿ ಹುಟ್ಟಿ, ಅದೂ ವೀರಶೈವ ಕರ್ನಾಟಕದಲ್ಲಿ ಹುಟ್ಟಿ ದೌರ್ಭಾಗ್ಯವಂತನಾದ. "ಜಗತ್ತಿನಲ್ಲಿ ಸಮಗ್ರ ಕ್ರಾಂತಿಯ ಮೂಲಪುರುಷನಾದರೂ" ಕೇವಲ ಒಂದು ಸಮಾಜದ ವ್ಯಕ್ತಿ ಎಂಬಂತಾದುದು ಕನ್ನಡಿಗರ ಅದರಲ್ಲೂ ವೀರಶೈವರ ದುರ್ದೈವವೇ ಸರಿ. ಇದಕ್ಕೆಲ್ಲ ಕಾರಣ ನಮ್ಮ ನಿರಭಿಮಾನ. ರಾಷ್ಟ್ರಕವಿ ಕುವೆಂಪುರವರು ಹೇಳುವಂತೆ "....ಒಂದು Social Stand Pointನಲ್ಲಿ ಬಸವೇಶ್ವರರಷ್ಟು ಅದ್ಭುತವಾಗಿ ಕೆಲಸಮಾಡಿದವರು ಯಾರೂ ಇಲ್ಲ. ಬಸವೇಶ್ವರರು ಹೋದಮಟ್ಟಕ್ಕೆ ಈಗಲೂ ಬಂದಿಲ್ಲ ನಾವು. ಅವರು ಒಬ್ಬ ಬ್ರಾಹ್ಮಣಳಾದ ಹುಡುಗಿಯನ್ನು ಒಬ್ಬ ಹೊಲೆಯನಿಗೆ ಮದುವೆ ಮಾಡಿದ್ದಾರೆ 800 ವರ್ಷಗಳ ಹಿಂದೆ. ಏನು ಯಾವ ಧೈರ್ಯದಿಂದ ಮಾಡಿರಬೇಕು? ಏನು ಕೆಚ್ಚಿರಬೇಕು ನೋಡಿ. ಗೊತ್ತಾಯ್ತೇನು? ನಾವಿನ್ನೂ ಬಂದಿಲ್ಲ ಆ ಮಟ್ಟಕ್ಕೆ. ಬಸವೇಶ್ವರರ ಸಾಮಾಜಿಕ ಪರಿವರ್ತನೆಯನ್ನು ನಮ್ಮ ದೇಶ ಒಪ್ಪಿಕೊಂಡಿದ್ದ ಪಕ್ಷದಲ್ಲಿ ಆವಾಗ ಮುಸ್ಲಿಮರು, ಕ್ರಿಶ್ಚಿಯನ್ನರು ಎಲ್ಲಾ ಬರ್ತಿರಲಿಲ್ಲ ಇಲ್ಲಿಗೆ ಬರ್ತಿರಲಿಲ್ಲ" (ಕನ್ನಡಪ್ರಭ. ಡಿಸಂಬರ್ 25, 1983) ಕವಿವಾಣಿಯನ್ನು ಇನ್ನಾದರೂ ಅರಿತು ಆಚರಿಸಿದರೆ ನಾಡಿಗೆ ಶುಭವಾದೀತು? ಬಸವಣ್ಣನ ಜಯಂತಿ ಸಾರ್ಥಕವಾದೀತು! ಬಸವಾನುಯಾಯಿಗಳಾದಿಯಾಗಿ ಎಲ್ಲರೂ ಆ ನಿಟ್ಟಿನಲ್ಲಿ ನಡೆಯುವಂತಾಗಲಿ ಎಂದೇ ಹಾರೈಸೋಣ.

# ಮಾಣಿಕ್ಯ ದೀಪ್ತಿ - 4

— ವಿದ್ವಾನ್ S. ಷಡಕ್ಷರಿ

ಒಂದಿನ ಚಿಂತನದ ವಸ್ತು "ಮೌನವನ್ನು ಕುರಿತದ್ದು, ಆಕಸ್ಮಿಕವಾಗಿ ನನಗೆ ವ್ಯಕ್ತಿಯೋರ್ವರ ಪರಿಚಯವಾಯಿತು. ದಿನಕೊಮ್ಮೆ ಅವರ ಜೊತೆಯಲ್ಲಿ ಒಂದು ಗಳಿಗೆ ಮಾತನಾಡುವ ಅವಕಾಶವಾಗುತ್ತಿತ್ತು. ಅವರು ಕೇವಲ ವಿದ್ಯಾವಂತರಷ್ಟೆ ಅಲ್ಲ. ವಿಚಾರವಂತರು ಮತ್ತು ಬುದ್ಧಿವಂತರು ಎಂಬುದು ಸ್ಪಷ್ಟವಾಯಿತು. ಜೊತೆಗೆ ಮಿತಭಾಷಿ, ಮೌನ ಸ್ವಭಾವದವರು. ಅಸಂಬದ್ಧವಾದ ಯಾರ, ಯಾವ ವಿಚಾರವನ್ನು ಗಮನಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಸಂಬಂಧಪಟ್ಟ, ವಿಷಯಗಳ ಬಗ್ಗೆ ಗೊಂದಲವನ್ನುಂಟುಮಾಡಿಕೊಳ್ಳದೆ ಯಾವ ವಿಧದಲ್ಲಿಯೂ ವಿರೋಧವನ್ನು ತಂದುಕೊಳ್ಳದೆ ಅವರು ಮೌನದಿಂದಲೇ ಕಾರ್ಯ ಪ್ರಗತಿ ಸಾಧಿಸುತ್ತಿದ್ದರು.

ಇವರ ಆ ಮೌನದ ಮಹತ್ವವನ್ನೆಲ್ಲಾ ಬಹಳ ದಿನಗಳಿಂದ ಗಮನಿಸಿದಾಗ ನನಗೆ ಹೀಗನ್ನಿಸಿತು.

ಮೌನವು ಸರ್ವಾರ್ಥ ಸಾಧನೆಗೆ ಪರಮ ಸಾಧನ. ನಮ್ಮ ಆತ್ಮ ನಿರೀಕ್ಷಣೆಗೆ ಪ್ರಪಥಮ ಸೋಪಾನ. ಈ ಮೌನ ವಿಕಾಸವಲ್ಲದ ಮೌನವಾಗಬಾರದು, ಸರ್ವವ್ಯಾಪಕವಾದ ಶಕ್ತಿಯಿಡೊಡಗೂಡಿದ ಮೌನವಾಗಬೇಕು. ಈ ವಿಕಾಸದಿಂದೊಡಗೂಡಿದ ಮೌನವು ಮನುಷ್ಯನನ್ನು ಯಾವುದೇ ವಿನಾಶಕ್ಕೆ ಗುರಿಪಡಿಸುವುದಿಲ್ಲ. ಆದರ್ಶ ತತ್ವಗಳತ್ತ, ಭಾವ ಶುದ್ಧಿಯ ಕ್ರಿಯಾಕಲಾಪಗಳತ್ತ ಕೊಂಡೊಯ್ಯುತ್ತದೆ. ಮಾನವನನ್ನು ಸಂಸ್ಕರಿಸುತ್ತದೆ. ವಿಚಾರವಂತರನ್ನಾಗಿ ಮಾಡುತ್ತದೆ. ಆಂತರಿಕ ಪ್ರಜ್ಞೆಯಿಂದ ವಿವೇಚನೆ ಮಾಡುವ ಶಕ್ತಿಯನ್ನು ದೊರಕಿಸಿ ಕೊಡುತ್ತದೆ. ಯಾವುದೇ ಕಾರ್ಯದಲ್ಲಿ ಅಥವಾ ಧ್ಯಾನದಲ್ಲಿ ತಲ್ಲೀನರಾಗಲು ಮೌನದಿಂದ ಸಾಧ್ಯವಾಗುತ್ತದೆ. ನಮ್ಮ ಆಂತರಿಕ ಸಾಧನೆಗೆ ಮೌನವು ಪವಿತ್ರ ದೇಗುಲವಿದ್ದಂತೆ. ಸುಗಮವಾದ ಬಾಳಬೇಕಿಗೆ ಇದು ಜ್ಯೋತಿರೂಪ. ಮೌನದಿಂದ ಯಾವುದೇ ಕಲಹ ಬೆಳೆಯಲಾರದು. ಆತ್ಮಶಕ್ತಿಯಿಂದ ಮೂಡಿಬಂದ ಮೌನವು ವ್ಯಕ್ತಿಯನ್ನು ಜಾಗೃತಗೊಳಿಸುತ್ತದೆ. ಅಂತಶ್ಶಕ್ತಿಯ ಮಹತ್ವವನ್ನು ತೋರ್ಪಡಿಸುತ್ತದೆ. ಮಾತು ಮಿತಿ ಮೀರಿದರೆ ಮೌನದಿಂದಿರುವುದು ಅಸಾಧ್ಯವಾಗುತ್ತದೆ. ಮೌನ ತಾಳಬೇಕಾದರೆ ಸಾಧನೆಬೇಕು, ಸಂಯಮಬೇಕು. ಪವಿತ್ರ ಭಾವನೆ ನೆಲೆಗೊಳ್ಳಬೇಕು. ಮೌನವು ಸೈಜವಾದುದಾ

(43 ನೇ ಪುಟ ನೋಡಿ)

ಕೌಶಿಕನ ...

# ಅಕ್ಕಮಹಾದೇವಿಯ ಅರಳಿದ ವ್ಯಕ್ತಿತ್ವ

— ಶಂಕರಮ್ಮ ಧನಶೆಟ್ಟಿ.
C/o ಬಸಣ್ಣ ಯಾದಗಿರಿ, ಷಹಬಾದ್-585228.

ಅಕ್ಕಮಹಾದೇವಿಯು ಕನ್ನಡ ನಾಡಿಗೆ ಮಾತ್ರವಲ್ಲ, ಇಡೀ ಜಗತ್ತಿನ ಮಹಿಳಾ ಸಾಧಕಿಯರಲ್ಲಿಯೇ ಅಗ್ರಗಣ್ಯಳಾದ ಅಪೂರ್ವ ವ್ಯಕ್ತಿ. ಹೆಣ್ಣುತನದ ಪರಿಪೂರ್ಣ ಸ್ವರೂಪವನ್ನು ಉಜ್ವಲವಾಗಿ ಬೆಳಗಿ ತೋರಿದ ಮಹಾಶಕ್ತಿ. ಹೆಣ್ಣುತನದ ಮಹಾ ಸಾಧನೆಯ ಸಂಕೇತ ಈಕೆ. ಮನವನ್ನು ಮನುಕುಲವನ್ನು ಬೆಳಗುವ ಮಹಾಮಾತೆ. ಅವಳ ವೈರಾಗ್ಯದ ಪ್ರತಿಭೆ ಅದ್ಭುತವಾದದ್ದು. ಈ ಜಗತ್ತೆಂಬ ಕದಳಿಯಲ್ಲಿ ಅದೊಂದು ಪರಿಮಳಿತ ಕರ್ಪೂರದ ಪರಂಜ್ಯೋತಿ. ಅಕ್ಕನು ಈ ಲೌಕಿಕ ಜೀವನವನ್ನು ಅಲ್ಲಗಳೆದು ಆಧ್ಯಾತ್ಮಿಕ ಜೀವನಕ್ಕೆ ಮಹತ್ವ ಕೊಟ್ಟಳು. ಆಕೆಯಲ್ಲಿಯ ವೈರಾಗ್ಯದ ಸತ್ವವನ್ನು ಅರಿತಾಗ ಮನುಷ್ಯನು ಭ್ರಮಿತನಂತಾಗುತ್ತಾನೆ ನಿಜ. ಆದರೆ ಆಧ್ಯಾತ್ಮಿಕ ಬೇರೆ, ಲೌಕಿಕ ಬೇರೆ, ತತ್ವಬೇರೆ, ನಿರೂಪಣೆ ಬೇರೆ ಎಂದು ಹೇಳುವವರೂ ಕೂಡ ಅಕ್ಕನವರ ಮಾತುಗಳಿಂದ ಅವರ ಜೀವನ ಚಿಂತನೆಯಿಂದ ಒಂದಿನಿಸಾದರೂ ಮಾರ್ಪಡದ ವ್ಯಕ್ತಿ ಯಾರು! ಹೆಣ್ಣು ಜಾತಿಯ ದೌರ್ಬಲ್ಯವೇ ಹೆಣ್ಣಿನ ಅಧೋಗತಿಗೆ ಕಾರಣವೆಂದ ಆಕೆಯ ವಿಚಾರ ಇದು ಎಂತಹ ಅದ್ಭುತವಾದದ್ದು! "ಭಿಕ್ಷೆ ಬೇಡುವಂತೆ ಮಾಡು, ಬೇಡಿದರೆ ನೀಡದಂತೆ ಮಾಡು, ನೀಡಿದರೆ ಅದನ್ನು ನಾಯಿ ಒಯ್ಯುವಂತೆ ಮಾಡು," ಎನ್ನುವ ಅಕ್ಕನವರ ವಚನಗಳಲ್ಲಿ ನಾವು ವೈರಾಗ್ಯದ ತುತ್ತ ತುದಿಯನ್ನು ಕಾಣುತ್ತೇವೆ.

ಅವಳು ಹೀಗೆ ಪ್ರಸಿದ್ಧಿಗೆ ಬರಲು ಅನೇಕ ಸಂಪ್ರಾಸಂಗಿಕವಾದ ಘಟನೆಗಳು ಕಾರಣವೆಂದು ಯೋಚಿಸುವುದು ಅವಶ್ಯಕ. ಅವಳ ವ್ಯಕ್ತಿತ್ವದ ವಿಕಾಸಕ್ಕೆ ಮನೋವೈಶಾಲ್ಯಕ್ಕೆ ಕಾರಣವಾದ ಪ್ರಥಮಕಾಣಿಕೆ ಕೌಶಿಕನಿಗೆ ಸಲ್ಲುತ್ತದೆ. ರಾಜನಾದ ಕೌಶಿಕನು ಒಬ್ಬ ಮಹಾನ್ ಜೀವಿ, ಸೌಂದರ್ಯೋಪಾಸಕ ಪ್ರೇಮದ ಆರಾಧಕ. ಅಕ್ಕಮಹಾದೇವಿಯ ಪ್ರೇಮಭಿಕ್ಷೆಗಾಗಿ ಅವಳ ಒಂದೇ ಒಂದು ಮಾತಿಗಾಗಿ ಆತನು ತನ್ನ ರಾಜ್ಯವನ್ನೇ, ತನ್ನ ಸಂಪತ್ತನ್ನೇ ಧಾರೆಯೆರೆಯಲು ಹಿಂಜರಿಯದೆ ಕೊನೆಗೆ ತನ್ನ ತನವನ್ನೇ ಮರೆತು ಹೆಜ್ಜೆ ಹೆಜ್ಜೆಯಲ್ಲಿ ಮಹಾದೇವಿಯ ಮಾತಿಗೆ, ಆಕೆಯ ಶರತ್ತುಗಳಿಗೊಪ್ಪಿ ತಾನು ರಾಜನೆನ್ನುವುದನ್ನೇ ಮರೆತುಬಿಡುವನು. ಎಂತಹ ತ್ಯಾಗಕ್ಕೂ ಸಿದ್ಧನಾದ ಕೌಶಿಕನಲ್ಲಿ ನಿಜವಾದ ಪ್ರೇಮಿಯಲ್ಲಿರಬೇಕಾದ ಗುಣಗಳನ್ನು ನಾವು ಕಾಣಬಹುದು. ಕೌಶಿಕನ ಪ್ರೇಮವು ಅದ್ವಿತೀಯವಾದುದು, ಅಪೂರ್ವವಾದುದು.

ಅಮರ ಪ್ರೇಮದಿಂದ ಪ್ರೇರಿತವಾದುದು. ಅವನ ಉದಾತ್ತವಾದ ಪ್ರೇಮವನ್ನು ತಿರಸ್ಕರಿಸುವ ಅಕ್ಕಮಹಾದೇವಿಯ ವರ್ತನೆಯು ಅತಿ ವಿಚಿತ್ರವಾದುದು.

ನಿಜನಾದ ಗಂಡನನ್ನು ಬಿಟ್ಟು, ಕಾಣದ ಗಂಡನನ್ನು ಹುಡುಕುತ್ತ ಹೋದಳು ಕೊನೆಗೆ ಆಕೆಗೆ ಶಾಂತಿ ಸಿಗುವುದೋ. ಆ ಮಾತು ಬೇರೆ. ಆದರೆ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸಿದ ಕೌಶಿಕನನ್ನು ಬಿಟ್ಟು ಅವನ ಪ್ರೇಮಪೂರಿತವಾದ ಹೃದಯವನ್ನು ತೊರೆಯಲು ಆಕೆ ಹೆಜ್ಜೆ ಹೆಜ್ಜೆಗೂ ಹವಣಿಸಿದ್ದಳು. ಕೊನೆಗೆ ಮೂರು ಶರತ್ತನ್ನು ಹಾಕುವಳು. 1. ತನ್ನ ಮನೋಧರ್ಮಕ್ಕೆ ವಿರುದ್ಧವಾದ ಬಲಾತ್ಕಾರವನ್ನು ಮಾಡುವುದಿಲ್ಲವೆಂದು ಭರವಸೆ ಕೊಡುವುದು, ಅದಕ್ಕೆ ಕೌಶಿಕನ ಉತ್ತರ "ಅಗತ್ಯವಾಗಿ ನಿನ್ನ ಮನಸ್ಸು ಕರಗಿದಾಗ ನನ್ನನ್ನು ಪ್ರೀತಿಸು." 2. ಎರಡನೆಯ ಶರತ್ತು ತನ್ನ ಭಕ್ತಿ ಸಾಧನೆಗೆ ಅಡ್ಡಿ ಬರಬಾರದು. ಅದಕ್ಕವನು ಖಂಡಿತವಾಗಿಯೂ ಇಲ್ಲ; ನಿನ್ನ ಇಷ್ಟವಿರುವಂತೆ ನಿನ್ನ ಭಕ್ತಿ ಸಾಧನೆಯನ್ನು ಮುಂದುವರಿಸು. 3. ಭಕ್ತಿಸಾಧನೆಯ ಕಡೆಗೆ ಮನಸ್ಸು ಕೊಡಬೇಕು. ಎಂದಾಗ, "ಹೂಂ" ಎಂದು ಎಲ್ಲ ಶರತ್ತುಗಳಿಗೂ ಕೌಶಿಕನು ಒಪ್ಪಿ ಅದರಂತೆ ನಡೆಯಲು ಆಕೆಗೆ ಆಶ್ವಾಸನವಿತ್ತನು. ಈ ಮಾತಿಗೆ ಸಾಕ್ಷಿ ಏನೆಂದಾಗ ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ-ತಮ್ಮ ಅಂತರಂಗವೇ ತಮಗೆ ಪರಮ ಸಾಕ್ಷಿ ಎಂದ ಕೌಶಿಕ. ಎಂಥ ದೊಡ್ಡ ಮಾತು ಇದು. ಅವನ ಮನಸ್ಸನ್ನು ಅಕ್ಕಮಹಾದೇವಿ ಕ್ಷಣ-ಕ್ಷಣಕ್ಕೂ ಒರೆಗೆ ಹಚ್ಚಿ ನೋಡಿ ಮಾತನಾಡಿದಾಗ ಕೌಶಿಕನ ಆಶಾಗೋಪುರ ಮತ್ತಷ್ಟು ಭದ್ರವಾಗುತ್ತದೆ. ಆದರೆ ಅದು ಕನಸಿನ ಮಾತೇ ಸರಿ.

ಅದಾವುದು, ಎಂತಹ ಐಶ್ವರ್ಯಕ್ಕೂ ಅಕ್ಕಮಹಾದೇವಿ ರಾಜನನ್ನು ಒಲಿಯದಿದ್ದುದು ಆಶ್ಚರ್ಯವನ್ನುಂಟುಮಾಡುತ್ತದೆ. ಸಾಮಾನ್ಯ ಹೆಣ್ಣಾಗಿದ್ದರೆ ಕೂಡಲೇ ಬಾಯಿಬಿಡುತ್ತಿತ್ತು. ಅದೇನೇ ಆಗಲಿ ಆಕೆಯ ವೈರಾಗ್ಯ ಆಕೆಯ ಮನಸ್ಸನ್ನು ಸ್ಥಿರಗೊಳಿಸಿದೆ. ಆಕೆ ಒಬ್ಬ ಮಹಾ ವ್ಯಕ್ತಿಯಾಗಲು, ಮಹಾ ತಪಸ್ವಿನಿಯಾಗಲು ಆಕೆಯ ಜೀವನವನ್ನು ರೂಪುಗೊಳಿಸಲು ಸಹಾಯಕವಾದ ಶಕ್ತಿ ಹಾಗೂ ವ್ಯಕ್ತಿ ಎಂದರೆ ಕೌಶಿಕ. ಆತನ ಅತಿಪ್ರೀತಿ, ಆಕೆಯ ಮೇಲಿರುವ ವ್ಯಾಮೋಹವೇ ? ಅಲ್ಲ.

ಅಕ್ಕಮಹಾದೇವಿಯ ಮಾತುಗಳಿಗೆ ಆತ ಬೆಲೆಕೊಟ್ಟನು. ಆದರಂತೆ ನಡೆದನು. ಆಡಿದಂತೆ ನಡೆದನು. ಆದರೆ ಆಕೆಯನ್ನು ಆತನು ಬಲಾತ್ಕರಿಸಲಿಲ್ಲ.

ಹೀಗೆ ಅಕ್ಕಮಹಾದೇವಿಯ ವೈರಾಗ್ಯದ ವಿಜಯಪತಾಕೆ ಹಾರಲು ಅದರ ಹಿಂದೆ ಕೌಶಿಕನ ಮೇಲೆ, ಅನುರಾಗವೇ ನಾಂದಿ ಎಂದರೆ ತಪ್ಪಾಗಲಾರದು.

ಸ್ತ್ರೀಗೂ ವ್ಯಕ್ತಿತ್ವವಿದೆ. ಆದರೆ ಇಂದು ಸ್ತ್ರೀ ತನ್ನ ಆತ್ಮವನ್ನೇ ಭೋಗಕ್ಕೆ ಮಾರಿ

ಕೊಂಡಿದ್ದಾಳೆ. ವಿಲಾಸಿನಿಯಾಗಿದ್ದಾಳೆ. ಕಾಮನಾಟಕದ ಬೊಂಬೆಯಾಗಿದ್ದಾಳೆ. ಬಹುಪಾಲು ಹೆಣ್ಣಿನ ಗತಿ ಇದೇ ಆಗಿದೆ. ದುರದೃಷ್ಟವೆಂದರೆ ಅಷ್ಟರಿಂದಲೇ ಆಕೆ ತನ್ನ ತೃಪ್ತಿಯನ್ನು ಕಂಡುಕೊಂಡಿದ್ದಾಳೆ. ಹೆಣ್ಣಿನ ಬಾಳೇ ಅದಕ್ಕಾಗಿ ಎಂದು ನಂಬಿಕೊಂಡಿದ್ದಾಳೆ. ತಾನು ವಿಲಾಸಿನಿಯಲ್ಲ ತಪಸ್ವಿನಿಯೆಂದು ಕಂಡುಕೊಳ್ಳಬೇಕಾಗಿದೆ ಹೆಣ್ಣು. ಇದನ್ನು ಸಾಧಿಸಿದ ವೈರಾಗ್ಯ ಮೂರ್ತಿಯಾದ ಅಕ್ಕನ ಜೀವನದ ವ್ಯಕ್ತಿತ್ವವು ಕೌಶಿಕ ಮಹಾರಾಜನ ಕಠೋರ ಕರುಣೆಯಿಂದ ಅರಳಿತು. ಅವನೊಬ್ಬ ನಿಜವಾದ ಪ್ರೇಮಿ. ಅದೊಂದು ಪವಿತ್ರ ಹೃದಯ ಸೌಂದರ್ಯೋಪಾಸಕ. ಪ್ರೇಮದ ಆರಾಧಕ.

ಆತನು ಅಕ್ಕಮಹಾದೇವಿಯನ್ನು ಕೊನೆಗೆ ತಡೆಯಲಿಲ್ಲ. ಆಕೆಯ ಉದಾತ್ತವಾದ ಸಾಧನೆಗಾಗಿ ತನ್ನ ಅಲ್ಪಸುಖವನ್ನು ಪೂರ್ಣವಾಗಿ ಬಿಟ್ಟುಕೊಟ್ಟ ತ್ಯಾಗಿಗೆ, ಸಲ್ಲಬೇಕಾದ ಸನ್ಮಾನವೇ ಕೌಶಿಕನದಾಗುತ್ತದೆ. ●

---

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

## ೧೯೮೫ನೇ ವರ್ಷದ

# ಬಸವಾದಿ ಶರಣರ ಜಯಂತಿಗಳು

೧. ಜನವರಿ ೧೪ ಸೋಮವಾರ – ಸಿದ್ಧರಾಮೇಶ್ವರ ಜಯಂತಿ.
೨. ಜನವರಿ ೨೧ ಸೋಮವಾರ – ಜೇಡರ ದಾಸಿಮಯ್ಯ ಜಯಂತಿ.
೩. ಫೆಬ್ರವರಿ ೧೭ ಭಾನುವಾರ – ಡೋಹರ ಕಕ್ಕಯ್ಯ ಜಯಂತಿ.
೪. ಮಾರ್ಚಿ ೨೨ ಶುಕ್ರವಾರ – ಅಲ್ಲಮಪ್ರಭು ಜಯಂತಿ.
೫. ಏಪ್ರಿಲ್ ೫ ಶುಕ್ರವಾರ – ಅಕ್ಕಮಹಾದೇವಿ ಜಯಂತಿ.
೬. ಏಪ್ರಿಲ್ ೨೩ ಮಂಗಳವಾರ – ಬಸವ ಜಯಂತಿ.
೭. ಜೂನ್ ೩ ಸೋಮವಾರ – ಅಂಬಿಗರ ಚೌಡಯ್ಯ ಜಯಂತಿ.
೮. ಜುಲೈ ೨ ಮಂಗಳವಾರ – ಹಡಪದ ಅಪ್ಪಣ್ಣ ಜಯಂತಿ.
೯. ಆಗಸ್ಟ್ ೨೦ ಮಂಗಳವಾರ – ಅಕ್ಕನಾಗಮ್ಮ ಜಯಂತಿ.
೧೦. ಸೆಪ್ಟಂಬರ್ ೧೮ ಬುಧವಾರ – ಮಡಿವಾಳ ಮಾಚಿದೇವ ಜಯಂತಿ.
೧೧. ಅಕ್ಟೋಬರ್ ೨೨ ಮಂಗಳವಾರ – ಹರಳಯ್ಯ ಮಧುವಯ್ಯಗಳ ಪುಣ್ಯಸ್ಮರಣೆ.
೧೨. ಅಕ್ಟೋಬರ್ ೨೩ ಬುಧವಾರ – ಕಲ್ಯಾಣಕ್ರಾಂತಿ ವಿಜಯೋತ್ಸವ.
೧೩. ನವಂಬರ್ ೧೩ ಬುಧವಾರ – ಚೆನ್ನಬಸವ ಜಯಂತಿ.
೧೪. ಡಿಸೆಂಬರ್ ೨೭ ಶುಕ್ರವಾರ – ಮಾದಾರ ಚೆನ್ನಯ್ಯ ಜಯಂತಿ.

**ಶುಭಾಶಯಗಳೊಂದಿಗೆ — "ಸಿದ್ಧಗಂಗಾ"**

# ತುಮ್ಮನಮಟ್ಟಿ ವಾರಿ ಶ್ರೀ ಮಲ್ಲಿಕಾರ್ಜುನ ದೇವಾಲಯ

— ಪ್ರೊ॥ ಎಸ್. ಎಸ್. ಭೂಸರೆಡ್ಡಿ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003.

ಏಳೂತಲೆ ನೆನೆದೇನ ಏಳೆಂಟು ದೇವರನ
ಏಳು ಬಾಗಿಲದ ಒಡಿಯಾನ, ಪರೂತಮಲ್ಲ
ಏಳುತಲೆ ಮೊದಲ ನೆನೆದೇನ.

ಕರ್ನಾಟಕದಲ್ಲಿ ಎಲೆಯ ಮರೆಯ ಹೂವಿನಂತೆ ಕೆರೆಯ ಮರೆಯಲ್ಲಿ ಅನೇಕ ಜಾಗೃತ ಪುಣ್ಯಕ್ಷೇತ್ರಗಳು ವಿರಾಜಿಸುತ್ತಿವೆ. ಆ ಭಾಗದ ಸಮಗ್ರ ಜನತೆಯ ಆರಾಧ್ಯ ದೇವತೆಯಾಗಿ ಪೂಜೆಗೊಳ್ಳುತ್ತಿವೆ. "ಅವರವರ ಭಕ್ತಿಗೆ ಅವರವರ ತೆರನಾಗಿ ಇರುತಿಹನು ಶಿವಯೋಗಿ". ಎಂಬ ರಸಋಷಿ ಮುಪ್ಪಿನ ಷಡಕ್ಷರಿಯ ಮುತ್ತಿನಂಥ ಮಾತು ಮನನೀಯ; ಗಮನೀಯ. ಭಯ-ಭಕ್ತಿ, ಶ್ರದ್ಧೆ-ನಿಷ್ಠೆಗಳಿಂದ ನಡೆದುಕೊಳ್ಳುವವರಿಗೆ ಸಹಜವಾಗಿ ಅವರ ಅಭೀಷ್ಟಗಳು ಫಲಿಸುತ್ತವೆ. ದೃಷ್ಟಿಯಂತೆ ಸೃಷ್ಟಿ, ಭಾವದಂತೆ ಮನ. ನಂಬುಗೆಯೇ ಕಾರಣವು ಶಂಭುನೊಲಿವುದಕೆಯಲ್ಲವೇ? ನಿಸರ್ಗ ಸುಂದರ ರಮ್ಯ ಮನೋಹರ ಪ್ರಶಾಂತ ಏಕಾಂತ ಸ್ಥಳದಲ್ಲಿರುವ ಈ ದೇವಮಂದಿರಗಳು ಮಾನಸಿಕ ಶಾಂತಿಯ ಪುಣ್ಯ ತಾಣಗಳಾಗಿವೆ. ಇಂಥವುಗಳಲ್ಲಿ ವಿಜಾಪುರ ಬೀಳಗಿ ತಾಲ್ಲೂಕಿನ ತುಮ್ಮನಮಟ್ಟಿ ಶ್ರೀವಾರಿ ಮಲ್ಲಿಕಾರ್ಜುನ ದೇವಾಲಯವೂ ಒಂದಾಗಿದೆ.

ಬಾಗಿಲುಕೋಟೆ ವಿಜಾಪುರ ರಾಜಮಾರ್ಗದಲ್ಲಿ ಘಟಪ್ರಭಾ ನದಿಯ ಸೇತುವೆ ದಾಟಿದ ನಂತರ ಅನಗವಾಡಿ ಎಂಬ ಗ್ರಾಮವಿದೆ. ಈ ಗ್ರಾಮದ ಆಗ್ನೇಯಕ್ಕೆ ಸುಮಾರು ಆರು ಕಿ. ಮೀ. ದೂರದಲ್ಲಿ ತುಮ್ಮರಮಟ್ಟಿ ಗ್ರಾಮವಿದೆ. ಆ ಗ್ರಾಮದ ಆಗ್ನೇಯಕ್ಕೆ ಎರಡು ಕಿ. ಮೀ. ದೂರದಲ್ಲಿ ನೆಡಿದಾಗಿ ಹಬ್ಬಿ ಹರಡಿದ ಗುಡ್ಡದ ಸಾಲು ಚಾಚಿದೆ. ಈ ರೋಮಾಂಚನಕಾರಿ ಗುಡ್ಡದ ಸುಂದರ ಸನ್ನಿವೇಶವನ್ನು ಕಣ್ಣಾರೆ ಕಂಡಾಗ ರಾಷ್ಟ್ರಕವಿ ಕುವೆಂಪುರವರು ರಚಿಸಿದ "ಕವಿಶೈಲದಲ್ಲಿ ಸಧ್ಯೆ" ಎಂಬ ಕವನದ ಈ ಸಾಲುಗಳು ನೆನಪಿಗೆ ಬರುತ್ತವೆ.

"ದೃಷ್ಟಿ ದಿಗಂತದ ಮೇರೆಯ ದಾಟ
ಗಗನದ ಮೇಘವಿತಾನವ ಮೀಟ
ದೂರಕೆ ದೂರಕೆ ಸುದೂರ ದೂರಕೆ
ಹಬ್ಬಿದೆ ಪರ್ವತ ದಿಗಂತ ಶೈಲಿ ಸ್ಯೆಲಿ ಸ್ಯೆಲಿ"

ಆ ಗುಡ್ಡದ ಮಧ್ಯದ ಒಂದು ಓರಿಯಲ್ಲಿ ನಿಸರ್ಗ ಸಹಜ ಸುಂದರ ತಾಣದಲ್ಲೊಂದು ದೇವಾಲಯವಿದೆ. ಗುಡ್ಡದ ಓರೆಯಲ್ಲಿರುವುದರಿಂದಲೇ ಈ ದೇವಾಲಯಕ್ಕೆ ವಾರಿ ಶ್ರೀ ಮಲ್ಲಿಕಾರ್ಜುನ ದೇವಾಲಯವೆಂದೇ ಜನತೆಯ ನಾಲಿಗೆಯ ಮೇಲೆ ನಿನದಿಸುತ್ತಿದೆ. ಇದೊಂದು ಪುರಾತನ ಪ್ರಸಿದ್ಧ ದೇವಾಲಯ. ಸಹಜವಾಗಿ ಉದ್ಭವಿಸಿದ ಲಿಂಗವಿದೆ. ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ಪ್ರತೀಕವಾಗಿಯೋ ಏನೋ ಎಂಬಂತೆ ರೂಪುಗೊಂಡಿದೆ; ಮೈದಾಳಿದೆ. ಅದು ಭವ್ಯವಾದ ಮಹಾಮಂದಿರ. ಇದು ಚಿಕ್ಕದಾದರೂ ಚೊಕ್ಕಮಂದಿರ. ಪ್ರಶಾಂತ ರಮ್ಯ ಪರಿಸರದ ಮಧ್ಯದಲ್ಲಿರುವ ಈ ದೇವಾಲಯದ ಆಕರ್ಷಕವಾದ ಹೆಬ್ಬಾಗಿಲು ಪ್ರೇಕ್ಷಕರನ್ನು, ಕೈಮುಗಿದು ಒಳಗೆ ಬಾ ಯಾತ್ರಿಕನೆ ಎಂದು ಆದರದಿಂದ ಬರಮಾಡಿಕೊಳ್ಳುತ್ತದೆ. ಎಡ ಬಲಗಳಲ್ಲಿ ಕಡೆದ ಕಲ್ಲುಗಳಿಂದ ರಚಿತವಾದ ಅಚ್ಚುಕಟ್ಟಾದ ವಿಶ್ರಾಂತಿಧಾಮಗಳಿವೆ. ದಣಿದ ದೇಹಕ್ಕೆ ವಿಶ್ರಾಂತಿ ನೀಡುತ್ತವೆ. ಕ್ಷಣಹೊತ್ತು ದಣಿವಾರಿಸಿಕೊಳ್ಳಬಹುದು, ಹಾಗೆಯೇ ಒಳಗೆ ಪ್ರವೇಶಿಸಿದೊಡನೆಯೇ ಸುತ್ತಲೂ ಬಿಲ್ವವನಗಳು, ಆಲದ ಮರಗಳು, ಆಕಾಶ ಮಲ್ಲಿಗೆಯ ಗಿಡಗಳ ಸೊಂಪಾದ ನೆರಳು ಪ್ರವಾಸಿಗರನ್ನು ಕೈಮಾಡಿ ಕರೆಯುತ್ತವೆ. ಈ ಮರುಳಜ ನೋಡಿದರೆ "ಬೆಟ್ಟದಾ ತುದಿಯಲ್ಲಿ ಬೆಳೆದ ಮರಗಳಿಗೆ ಆಹಾರವನ್ನಿತ್ತವರೋ ಯಾರೋ" ಎಂಬ ಕನಕೋಕ್ತಿ ತಟ್ಟನೆ ಸ್ಮರಣೆಗೆ ಬರುತ್ತದೆ. ಟೊಂಗೆಗಳು ಚಾಮರ ಬೀಸುತ್ತವೆ. ಗಿಳಿ-ಕೋಗಿಲೆಗಳ ಕೂಜನದ ಇಂಚರದ ಇಂಪು ಮನಸ್ಸನ್ನು ತಣಿಸುತ್ತದೆ. ಮ ನೋ ೀ ಹ ರ ವಾ ದ ಮೋಹಕ ದೃಶ್ಯ ಎಂಥವರನ್ನಾದರೂ ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ. ಚಿಕ್ಕದಾದರೂ ಚೊಕ್ಕದಾದ ಶ್ರೀ ಮಲ್ಲಿಕಾರ್ಜುನ ಮಂದಿರ ಅತ್ಯಂತ ಸುಂದರವಾಗಿದೆ. ಮಂದಿರದ ಮಧ್ಯದಲ್ಲಿ ಉದ್ಭವ ಲಿಂಗವಿದೆ. ಈ ಲಿಂಗ ದರ್ಶನದಿಂದ ಸಹಜವಾಗಿ ಭಕ್ತಿರಸದ ಕಾರಂಜಿ ಪುಟಿಯುತ್ತದೆ. ಮನವು ಮಡಿಯಾಗುತ್ತದೆ. ಈ ಜಾಗೃತ ಪೀಠದ ಮಹತ್ವವನ್ನು ಮನದಂದು ಪೇಶ್ವೆಯರು ಈ ಲಿಂಗಪೂಜೆ ಪುರಸ್ಕಾರ ನಿರಂತರವಾಗಿ ನಡೆಯಲು ಪೂಜಾರಿಗಳಿಗೆ 80ಎಕರೆ ಭೂಮಿಯನ್ನು ದತ್ತಿ ಹಾಕಿಕೊಟ್ಟಿದ್ದಾರೆ. ಅಂತೆಯೇ ಇಂದಿಗೂಸಹ ವ್ಯವಸ್ಥಿತವಾಗಿ ಅಭಿಷೇಕ ಮೊದಲಾದ ಧಾರ್ಮಿಕ ಕಾರ್ಯಗಳು ಇಲ್ಲಿ ಅವ್ಯಾಹತವಾಗಿ ನಡೆಯುತ್ತಿವೆ. ಸುತ್ತಲಿನ ಆಳ ಅಗನವಾಡಿ, ಭೈರಮಟ್ಟಿ, ಮೊದಲಾದ ಹಳ್ಳಿಯ ಭಕ್ತವಂತರೂ ಈ ಪವಿತ್ರವಾದ ಪುಣ್ಯಕ್ಷೇತ್ರದಲ್ಲಿ ಮದುವೆ ಸಮಾರಂಭಗಳನ್ನು ನೆರವೇರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಈ ಮಂದಿರದ ಎಡಭಾಗ ಸ್ವಲ್ಪ ಮೇಲ್ಬದಿಯಲ್ಲಿ ಚಿಕ್ಕದಾದ ಒಂದು ಪುಷ್ಕರಣಿ ಇದೆ. ಸದಾ ಸಿಹಿನೀರಿನಿಂದ ತುಂಬಿನಿಂತಿದೆ. ನೀರಡಸಿದವರ ತೃಷೆಯನ್ನು ಹಿಂಗಿಸುತ್ತದೆ. ಮದುವೆ ಮೊದಲಾದ ಸಮಾರಂಭಗಳಲ್ಲಿ ಈ ಪುಷ್ಕರಣಿಯ ನೀರನ್ನೇ ಬಳಸಲಾಗುತ್ತಿದೆ. ಈ ಜಲಪಾನ ಮಾಡಿದವರಿಗೆ ಇಂದಿಗೂ ಯಾವ ಬಗೆಯಿಂದಲೂ ಶಾರೀರಿಕ ಬಾಧೆಯಾಗಿಲ್ಲವೆಂದು ತಿಳಿದುಬರುತ್ತದೆ. ಈ ಜಲಾಶಯವನ್ನು ಬಿಟ್ಟರೆ, ಸುತ್ತಲೂ ಎಲ್ಲಿ ಅಗೆದರೂ ನೀರಿನ ಸೆಲೆಯೇ ಚಿಮ್ಮುತ್ತಿಲ್ಲ. ಊರಿನ ಕುಡಿಯುವ

ನೀರಿನ ಪೂರೈಕೆಯನ್ನು ಘಟಪ್ರಭ ನದಿಯಿಂದ ಪೂರೈಸಲಾಗುತ್ತದೆ. ಮಂದಿರದ ಸುತ್ತ
ಲಿನ ಗೋಡೆಗಳ ಮೇಲೆ ಭಕ್ತಿಭಂಡಾರಿ ಬಸವಣ್ಣ, ವೀರವಿರಾಗಿಣಿ ಅಕ್ಕಮಹಾದೇವಿ
ಮೊದಲಾದ ಶರಣರ ವರ್ಣಮಯ ಭಾವಪೂರ್ಣ ವರ್ಣಚಿತ್ರಗಳು ಅತ್ಯಂತ ಮನೋ
ಹರವಾಗಿವೆ. ಭಕ್ತಾದಿಗಳ ಮನದ ಮೇಲೆ ಪರಿಣಾಮಕಾರಿ ಪ್ರಭಾವ ಬೀರುತ್ತವೆ.

ಈ ಗುಡ್ಡದ ನೆತ್ತಿಯ ಮೇಲೆ ಪಾತಾಳಗಂಗೆಯಿದೆ. ಹಾಗೆಯೇ ರುದ್ರಪಾ
ವಿದೆ ಪ್ರತಿ ಅಮವಾಸ್ಯೆ ಹುಣ್ಣಿಮೆಯ ದಿನಗಳಲ್ಲಿ ತಪ್ಪದೇ ಅಭಿಷೇಕ ನಡೆಯುತ್ತದೆ
ಈ ಮಲ್ಲಿಕಾರ್ಜುನನಿಗೆ ಹಿಂದುಳಿದ ಜನಾಂಗಕ್ಕೆ ಸೇರಿದ ಭಕ್ತನೊಬ್ಬ ಅತ್ಯಂತ ಭಯ
ಭಕ್ತಿಯಿಂದ ಚಿತ್ತಾಕರ್ಷಕವಾದ ಹದವಾದ ಚರ್ಮದಿಂದ ತಯಾರಿಸಿದ ಪಾದು
ಗಳನ್ನು ಅರ್ಪಿಸಿದ್ದಾನೆ. ಕಲಾಕುಸುರಿನಿಂದ ಕೂಡಿದ ಈ ಪಾದುಕೆಗಳು ಜನಪ
ವಿದ್ಯಾರ್ಥಿಗಳಿಗೆ ಅಭ್ಯಾಸನೀಯ ವಸ್ತುಗಳಾಗಿವೆ.

ಏನೇ ಇದ್ದರೂ ಇದೊಂದು ಪುರಾತನ ಪ್ರಸಿದ್ಧ ಪ್ರೇಕ್ಷಣೀಯ ರಮ್ಯ ಮನೋ
ಹರ ತಾಣವೆಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. "ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೋ" ಎನ್ನುವಂತೆ ಇದೊಂದು ಈ ಭಾಗದ ಭಕ್ತರಿಗೆ ವರದಾನ
ವಾಗಿದೆ. ಅನುಷ್ಠಾನ ಮಾಡುವವರಿಗಂತೂ ಇದೊಂದು ಹೇಳಿಮಾಡಿಸಿದಂತಿದೆ
ಸಿಂಧೂರ ಲಕ್ಷ್ಮಣನೂ ಕೆಲವು ಸಮಯ ಇಲ್ಲಿ ಆಶ್ರಮ ಪಡೆದಿದ್ದನಂತೆ. ಆ ಕಾಲದಲ್ಲಿ
ಇದೊಂದು ದಟ್ಟ ಕಾಡಾರಣ್ಯವಾಗಿತ್ತು. ಅನೇಕ ಕ್ರೂರ ಮೃಗಗಳೂ ಇಲ್ಲಿ ವಾಸ
ವಾಗಿದ್ದವೆಂದು ಹಿರಿಯರ ಹೇಳಿಕೆಯಾಗಿದೆ. ಮುಕ್ತಿಯ ನಿಲ್ಮನೆಯಾಗಿದೆ. ಶಾಂತಿ
ಯ ಸಾಗರವಾಗಿದೆ. ಜೀವನದ ಜಂಜಾಟದಲ್ಲಿ ಬೆಂದು ಬಸವಳಿದ ಜೀವಕ್ಕೆ ನವ
ಚೈತನ್ಯವನ್ನುಂಟುಮಾಡುವ ಸ್ಫೂರ್ತಿಯ ಸೆಲೆಯಾಗಿದೆ. ಪ್ರಕೃತಿಯ ಆರಾಧಕರಂತೂ
ಒಮ್ಮೆ ಅವಶ್ಯವಾಗಿ ಸಂದರ್ಶಿಸಬೇಕಾದ ಸ್ಥಳವಿದು. ಈ ಮಲ್ಲಿಕಾರ್ಜುನ ದೇವಾಲ
ಯದ ಎದುರಿನಲ್ಲಿ ಕುಳಿತು ಹೀಗೆ ಭಯ-ಭಕ್ತಿಯಿಂದ ಭಜಿಸುವುದೊಂದೇ ನಮಗುಳಿದ
ಏಕಮಯ ಮಾರ್ಗ.

"ಕರುಣಾಕರಾ ನಿನ್ನ ಮಾಯೆಗಂಜುವೆನಯ್ಯಾ
ಪರಮೇಶ್ವರಾ ಮಲ್ಲಿನಾಥಾ ಕರುಣಿಪುದಯ್ಯ
ಇನ್ನೇವೆನಿನ್ನೀವೆನಯ್ಯೋ ಮಹಾದೇವ
ಪನ್ನಗಾಭರಣ ಕರುಣಿಪ್ಪುದೆಲೆ ಮಹಾದೇವ"

ಇಲ್ಲೊಂದು ವೈರಾಗ್ಯದ ಮೇರುಗಿರಿಯನ್ನೇರಿದ ಅಕ್ಕಮಹಾದೇವಿಯ ವಚನವ
ನೆನಪಿಗೆ ಬರುತ್ತದೆ.

"ಅಯ್ಯಾ, ನೀ ಕೇಳದರೆ ಕೇಳು
ಕೇಳದಿರ್ದೊಡೆ ಮಾಣು

ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನೊಲಿದರೆ ಒಲಿ
ಒಲಿಯದಿರ್ದೊಡೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀ ನೋಡಿದೊಡೆ ನೋಡು
ನೋಡದಿರ್ದೊಡೆ ಮಾಣು
ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ
ಚೆನ್ನಮಲ್ಲಿಕಾರ್ಜುನಯ್ಯ, ನಾನಿಮ್ಮ ಪೂಜಿಸಿ
ಹರುಷದೊಳೋಲಾಡುವೆನಯ್ಯಾ''

ಈ ಹರುಷ ಶರಧಿಯಲ್ಲಿ ಓಲಾಡುವ ಭಾಗ್ಯ ಸರ್ವರಿಗೂ ದೊರೆಯಲಿ.

ಕಾಯಕಯೋಗಿಗಳೂ, ಚರಿತ್ರವಂತರೂ, ಆಧುನಿಕ ಕೃಷಿಯಲ್ಲಿ ಪರಿಣತರೂ, ಗ್ರಾಮದ ಶ್ರೀಮಂತರೂ ಆದ ಪೂಜ್ಯ ಶ್ರೀ ರುದ್ರೇಗೌಡ ಪಾಟೀಲ ಅವರ ಈ ಮನೆತನದ ಆರಾಧ್ಯ ದೇವತಾಪುರುಷನಾದ ಈ ಮಲ್ಲಿಕಾರ್ಜುನ ದೇವಾಲಯದ ಸರ್ವತೋಮುಖವಾದ ಬೆಳವಣಿಗೆಗೆ ಪ್ರಯತ್ನಿಸುತ್ತಿರುವುದು ನಿಜವಾಗಿಯೂ ಅಭಿನಂದನೀಯ. ಉಸುಕಿನ ಮರುಭೂಮಿಯಲ್ಲಿ ನೀರಿನ ಕಾರಂಜಿಯನ್ನು ಕಂಡಂತೆ ಈ ದೇವಾಲಯವು ಎಲ್ಲರ ಹೃದಯವನ್ನು ಅರಳಿಸುವಂತಿದೆ. ಭಕ್ತಿ ಸೌರಭವನ್ನು ಸೂಸುವಂತಿದೆ. ದೂರದ ಶ್ರೀ ಶೈಲ ಮಲ್ಲಿಕಾರ್ಜುನನ ದರ್ಶನಲಾಭ ದೊರೆಯಲಿಲ್ಲವೆಂಬ ಹತಾಶ ಮನೋಭಾವನೆಯನ್ನು ಈ ಸುಂದರ ದೇವಾಲಯ ತೊಲಗಿಸಬಲ್ಲದು. ಈ ದೇವಾಲಯದ ಬಗೆಗೆ ಇನ್ನೂ ಹೆಚ್ಚಿನ ಸಂಗತಿಯನ್ನು ತಿಳಿಸಿದರೆ ಈ ಲೇಖನವನ್ನು ಇನ್ನೂ ಒಗ್ಗಿಸಬಹುದು. ಈ ಮಂದಿರದ ಭಕ್ತಕೋಟಿ ಈ ಬಗೆಗೆ ಆಸಕ್ತಿ ವಹಿಸುವರೆಂದು ನಂಬಲಾಗಿದೆ.

# ಕರಬೂಜದ ಇತಿಹಾಸ

— ಬಿ. ಸುಬ್ರಾಯ ಅಡಿಗ
ನಿವೃತ್ತ ಉಪಾಧ್ಯಾಯರು, ಸಂಡೂರು-583119.

ಕರಬೂಜ ಹಣ್ಣಿನ ಹೆಸರೆತ್ತಿದರೆ ಬಾಯಲ್ಲಿ ನೀರೂರುವುದು. ಬೇಸಗೆಯಲ್ಲಂತೂ ಇದು ನಮ್ಮ ನೀರಡಿಕೆ ತಣಿಸಲು ತುಂಬ ಸಹಾಯಕ. ಆದರೆ ನಾನಿಲ್ಲಿ ಆ ಹಣ್ಣಿನ ಗುಣಧರ್ಮಗಳ ಬಗ್ಗೆ ಬರೆಯದೆ ಅದರ ರೋಮಾಂಚಕ ಇತಿಹಾಸ ತಿಳಿಸುತ್ತೇನೆ.

ಕರಬೂಜದ ಬೀಜ ಹಾಗೂ ಅದರ ತಿರುಳಿಗಾಗಿ ಎಷ್ಟೋ ರಕ್ತಪಾತ ನಡೆಯಿತು. ಕರಿಮೆಣಸನ್ನು ಬಿಟ್ಟರೆ ಕರಬೂಜವೇ ವಿದೇಶೀಯರನ್ನು ಭಾರತದತ್ತ ಸೆಳೆಯಲು ಮುಖ್ಯ ಸಾಧನವಾಯಿತು. ಇದಕ್ಕಾಗಿಯೇ ಸ್ಪೇನ್ ವಾಸಿಗಳೂ ಪೋರ್ಚುಗೀಸರೂ ಭಾರತಕ್ಕೆ ಬರಲು ಸಮುದ್ರಮಾರ್ಗ ಹುಡುಕಲು ಮುಂದಾದರು. ೧೪೯೮ರಲ್ಲಿ ವಾಸ್ಕೋಡಿಗಾಮ ಕಲ್ಲಿಕೋಟೆಯ ರೇವಿನಲ್ಲಿಳಿದಾಗ ಕರಬೂಜವೇ ಅವನ ಬಾಯಿಂದ ಜೊಲ್ಲು ಸುರಿಸಿತ್ತು!

ಕಪ್ತಾನ್ ಬ್ಲಿಗ್‌ನ ತಾಹಿತೀ ದ್ವೀಪಯಾತ್ರೆ ಹಾಗೂ ಅವನ ಹಡಗು ಬೌಂಟೀಯ ದಂಗೆಯ ಬಗ್ಗೆ ನೀವೆಲ್ಲ ತಿಳಿದಿರಬಹುದು. ಇದನ್ನಾಧರಿಸಿಯೇ "ಮ್ಯುಟಿನೀ ಆನ್ ದ ಬೌಂಟೀ" ಎಂಬೊಂದು ಫಿಲ್ಮ್ ಕೂಡ ತಯಾರಾಗಿತ್ತು. ಆದರೆ ಆ ಪ್ರವಾಸದ ಕಾರಣ ಹಾಗೂ ವಿವರಗಳನ್ನು ಹೆಚ್ಚಿನವರು ಅರಿತಿಲ್ಲ. ಇದರ ಮೂಲದಲ್ಲೂ ಕರಬೂಜವೇ ಇತ್ತು. ವೆಸ್ಟ್ ಇಂಡೀಸ್‌ನಲ್ಲಿ ಕಬ್ಬು ಬೆಳೆಯುವ ಆಂಗ್ಲರು ಮಸ್ಕ್ ಮೇಲನ್ ಎಂಬೊಂದು ಹೊಸಪದಾರ್ಥವನ್ನು ಕಂಡು ಹಿಡಿದರು. ಇದನ್ನವರು ತಮ್ಮ ಗುಲಾಮರಿಗೆ ತಿನ್ನಲು ಕೊಡುತ್ತಿದ್ದರು. ದಕ್ಷಿಣ ಸಮುದ್ರದ ನೆಲ ಯಾತ್ರಿಕರ ಮೂಲಕ ಈ ಸುದ್ದಿ ಬ್ರಿಟನ್ನಿಗೆ ತಲುಪಿತು. ಆಗ ವನಸ್ಪತಿ ಶಾಸ್ತ್ರಜ್ಞನಾದ ಸರ್ ಜೋಸೆಫ್ ಬ್ಯಾಂಕ್ಸ್ ರಾಯಲ್ ಸೊಸೈಟಿಯ ಅಧ್ಯಕ್ಷರಾಗಿದ್ದರು. ಕಪ್ತಾನ್ ಬ್ಲಿಗ್‌ನ ನೇತೃತ್ವದಲ್ಲಿ ಅಲ್ಲಿಗೊಂದು ಹಡಗು ಕಳುಹಿಸುವಂತೆ ಅವರು ಮೂರನೇ ಜಾರ್ಜ್ ದೊರೆಯನ್ನು ಒತ್ತಾಯಿಸಿದರು.

೧೫-೧೦-೧೭೮೮ರಂದು ಬ್ಲಿಗ್ 'ಬೌಂಟೀ' ಹಡಗನ್ನೇರಿ ಹೊರಟು ತಾಹಿತೀಗೆ ತಲುಪಿದ ಅಲ್ಲಿಯ ನಿವಾಸಿಗಳಿಗೆ ಶರಾಬು ಹಾಗೂ ಬಾದಾಮಿ ಕೊಟ್ಟು ಅವರಿಂದ

ಕರಬೂಜದ ಬೀಜಗಳನ್ನು ಕೊಂಡ. ೫ ತಿಂಗಳ ಬಳಿಕ ಕಪ್ತಾನ ಬ್ಲಿಗ್ ಅಲ್ಲಿಂದ ಹೊರಡಲು ಅನುವಾದಾಗ ಅವನ ಸೈನಿಕರು ಒಪ್ಪಲಿಲ್ಲ. ಹೆಚ್ಚಿನವರು ಈ ಅಲ್ಪಾವಧಿಯಲ್ಲೇ ಮದುವೆಯಾಗಿ ಅಲ್ಲೇ ನೆಲೆಸಿದ್ದರು. ಜೊತೆಗೆ ಕರಬೂಜಾ ವ್ಯವಸಾಯದ ಲೋಭವೂ ಅವರನ್ನು ತಡೆಹಿಡಿದಿತ್ತು. ಬ್ಲಿಗ್ ಒತ್ತಾಯಿಸಿದಾಗ ಏಪ್ರಿಲ್ ೨೮ರಂದು ಸೈನಿಕರಲ್ಲಿ ವಿರೋಧ ಭಾವನೆ ಬೆಳೆಯಿತು. ದಂಗೆ ಹರಡಿ ರಕ್ತಪಾತದ ಪರಿಸ್ಥಿತಿ ಒದಗಿತು. ಬ್ಲಿಗ್‌ನನ್ನು ಪುಟ್ಟ ನಾವೆಯಲ್ಲಿ ಹಾಕಿ ತೇಲಿ ಬಿಡಲಾಯಿತು. ಅವನು ಅದೆಂತೋ ಉಳಿದುಕೊಂಡ. ಅಲ್ಲದೆ ಕರಬೂಜದ ಆಸೆಯಿಂದ ಆತ ಮತ್ತೊಮ್ಮೆ ತಾಹಿತೀ ದ್ವೀಪಕ್ಕೆ ಮರಳಿ ಸಾಕಷ್ಟು ಹಣ್ಣುಗಳನ್ನು ಹಲವು ಬೀಜಗಳನ್ನು ಕೊಂಡೊಯ್ದ. ಭಾರತದಲ್ಲಿ ಸುಮಾರು ಎರಡು ಸಾವಿರ ವರ್ಷಗಳಿಂದಲೂ ಕರಬೂಜವನ್ನು ಬೆಳೆಸಲಾಗುತ್ತಿದೆ. ೧೭ ನೇ ಶತಮಾನದ ಮಧ್ಯಭಾಗದಲ್ಲಿ ಡಚ್ಚರು ಐರೋಪ್ಯ ಮಾರುಕಟ್ಟೆಗಳಿಗೆ ಇದನ್ನು ಮತ್ತೆ ಒಯ್ದರು. ಆಂಗ್ಲರು ಭಾರತಕ್ಕೆ ಬಂದಾಗ ಅವರಿಗೂ ಕರಬೂಜದ ವ್ಯಾಪಾರ ಲಾಭದಾಯಕವೆನಿಸಿತು. ಆರಂಭದಲ್ಲಿ ಕನಿಷ್ಠ ಅರ್ಧ ಭಾಗದಲ್ಲಾದರೂ ಕರಬೂಜ ಬೆಳೆಸಬೇಕೆಂದು ಕರ್ಜದ ಮೇಲೆಯೇ ಭಾರತೀಯ ರೈತರಿಗೆ ಬೇಸಾಯಕ್ಕೆ ಹೊಲ ಕೊಡಲಾಗುತ್ತಿತ್ತು. ರೈತರು ದಂಗಾದರು. ಮಜೂರಿಯ ರೂಪದಲ್ಲಿ ಗಂಡಸಿಗೆ ೫ ಪೈಸೆ, ಹೆಂಗಸಿಗೆ ೩ ಪೈಸೆ ಹಾಗೂ ಹುಡುಗನಿಗೆ ೧ ಪೈಸೆಯಂತೆ (ಹಿಂದಿನ ನಾಣ್ಯ) ಸಿಗುತ್ತಿತ್ತು. ಪ್ರತಿ ವರ್ಷವೂ ಲಕ್ಷಾಂತರ ಮಣ ಕರಬೂಜ ಹೆಚ್ಚಿನ ಬೆಲೆಗೆ ಐರೋಪ್ಯ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತಿತ್ತು. ಆಂಗ್ಲರು ಈ ರೀತಿ ಬೊಕ್ಕಸ ತುಂಬಿಕೊಂಡರು. ಭಾರತೀಯ ರೈತ ಬಡವಾಗುತ್ತಾ ಹೋದ.

ಮೆಲ್ಲಮೆಲ್ಲನೆ ಕರಬೂಜದ ಬಗ್ಗೆ ಬಹಳಷ್ಟು ಶೋಧ ನಡೆಯಿತು. ಮೊಹೆಂಜೊದಾರೋದ ಅಗೆತದಿಂದ ಕರಬೂಜದ ಬೀಜಗಳೂ ಸಿಕ್ಕವು. ಆ ಕಾಲದಲ್ಲಿ ಅವುಗಳ ಬೆಲೆ ಬಂಗಾರಕ್ಕೆ ಸಮವಾಗಿದ್ದಿರಬಹುದೆಂದು ಊಹಿಸಲಾಗುತ್ತಿದೆ.

ರಾಷ್ಟ್ರೀಯ ಪ್ರತಿಷ್ಠೆಗಾಗಿ ಬ್ರಿಟನ್ ೧೮೪೦ರಲ್ಲಿ ಚೀನದೊಡನೆ ಯುದ್ಧ ಮಾಡಿತು. ಚೀನ ಬ್ರಿಟಿಷ್ ಹಡಗು ಪಡೆಯೆದುರು ನಿಲ್ಲದಾಯಿತು. ೧೮೪೨ರ ಜೂನ್ ತಿಂಗಳ "ನಾನ್‌ಕಿಂಗ್ ಸಂಧಿ"ಯಂತೆ ಹ್ಯೂಂಟನ್, ಶಂಘಾಯ್, ಅಮೋಯ್ ಹಾಗೂ ಫೂಚಾವ್ರೋ ಬಂದರುಗಳನ್ನು ವಿದೇಶೀ ವ್ಯಾಪಾರಕ್ಕಾಗಿ ತೆರೆಯಲಾಯಿತು. ವ್ಯಾಪಾರದ ಮುಖ್ಯ ಉದ್ದೇಶ ಅಫೀಮಾದರೂ ಅದರ ಜೊತೆಗೆ ಕರಬೂಜದ ಮಾರಾಟವೂ ಇಂಗ್ಲೀಷರ ಕಾರ್ಯಕ್ರಮದಲ್ಲಿ ಸೇರಿಕೊಂಡಿತ್ತೆಂಬುದು ಆಮೇಲೆ ಬೆಳಕಿಗೆ ಬಂತು. [ಹಿಂದಿಯಿಂದ]

# ಗುರುಭಕ್ತಿ

—ಬಿ. ಎಸ್. ಕೃಷ್ಣಮೂರ್ತಿ
ನಂ. 5, ಸೀತಾವಿಲಾಸ ರಸ್ತೆ, ಮೈಸೂರು-570 001.

ಪ್ರತಿ ಮಾನವನೂ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸುವ ಮೊದಲು, ವಿಘ್ನಗಳನ್ನು ಪರಿಹರಿಸಲು ಗಣಪತಿಯನ್ನು ಆರಾಧಿಸುತ್ತಾನೆ. ಈತನು ವಿಘ್ನಪರಿಹಾರಕರ್ತನಾಗಿರುವುದಲ್ಲದೆ, ವಿದ್ಯಾಲಾಭಕರ್ತನೂ ಆಗಿರುತ್ತಾನೆ

ಅನಂತರ ವಿದ್ಯಾದೇವತೆ ಶಾರದೆಯನ್ನು ಪೂಜಿಸಿದ ಮೇಲೆ ವಿದ್ಯಾಭ್ಯಾಸಕ್ಕೆ ತೊಡಗುವುದು. ಆರ್ಷೇಯದಿಂದಲೂ ಬಂದಿರುವ ಪದ್ಧತಿ, ಇಷ್ಟು ಮಾಡಿದರೆ ವಿದ್ಯೆ ತಾನಾಗಿ ಬರುವುದೇ ? ಎಂದಿಗೂ ಸಾಧ್ಯವಿಲ್ಲ. ಇವರಿಬ್ಬರೂ ಪರೋಕ್ಷ ದೇವತೆಗಳಾಗಿ, ವಿದ್ಯಾನುಗ್ರಹ ಮಾಡುವ ಶಕ್ತಿಗಳು ಮಾತ್ರ ಆದುದರಿಂದ ವಿದ್ಯಾಭ್ಯಾಸಕ್ಕೆ ಪ್ರತ್ಯಕ್ಷ ದೇವತೆಯಾದ ಸದ್ಗುರುವಿನ ಅಗತ್ಯವಿದೆ ಇವನನ್ನು ಗುರ್ತಿಸಿ, ವಶಮಾಡಿಕೊಂಡು, ಆತನ ಅನುಗ್ರಹದಿಂದ ವಿದ್ಯೆ ನಡಿಸಬೇಕಾಗಿದೆ. ಆತನ ಕೃಪೆ ಆಗಬೇಕು, ಆತ ಒಲಿದು ವಿದ್ಯಾದಾನಮಾಡಿದರೆ ವಿದ್ಯೆ ಸಫಲ !

"ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ"

ಎಂದು ದಾಸವರೇಣ್ಯರಾದ " ಪುರಂದರದಾಸ "ರು ಹೇಳಿರುತ್ತಾರೆ.

ಇಲ್ಲಿ ಮುಕುತಿ ಎಂಬ ಪದ ಮುಕ್ತಿಯೇ ಆಗಿದೆ. ಇದನ್ನು ವಿಶ್ಲೇಷಿಸಿದರೆ ಮನುಜರಿಗೆ ದೇಹಾಂತ್ಯದಲ್ಲಿ ದೊರಕುವ ಮುಕ್ತಿಯಲ್ಲ, ಅಥವಾ ಮನುಜನು ಇಹ ಜನ್ಮದಲ್ಲಿ ಸುಖದುಃಖಗಳನ್ನು ಅನುಭವಿಸಿ, ತನ್ನ ಸುಕೃತ ಅಥವಾ ದುಷ್ಕೃತಗಳ ಪರಿಣಾಮವಾಗಿ ದೇಹ ತ್ಯಜಿಸಿ, ತಮ್ಮ ಕರ್ಮಾನುಸಾರ ವೈಕುಂಠ ಪದವಿಯನ್ನೋ ಇಲ್ಲವೆ ಕೈಲಾಸ ಪದವಿಯನ್ನೋ ಪಡೆಯುವುದಲ್ಲ. ಇಲ್ಲಿ ಮುಕ್ತನು ಅಂದರೆ ಜೀವನ್ಮುಕ್ತನೂ ಎಂದು ಹೇಳಬಹುದು. ಇವುಗಳ ಬಗೆಯನ್ನು ಸರಿಯಾದ ಅರ್ಥದಿಂದ ಮನವರಿಕೆ ಮಾಡಿಸಲು " ಗುರು " ಇರಬೇಕು.

ಇಷ್ಟನ್ನು ಹೇಳಿದರೂ ದಾಸರು ಹೇಳಿದ 'ಮುಕ್ತಿ' ಎಂಬ ಶಬ್ದದ ಅರ್ಥ ಪರಿಪೂರ್ಣವಾಗುವುದಿಲ್ಲ. ಇದರ ನಿಜವಾದ ಅರ್ಥವೆಂದರೆ ವಿದ್ಯೆಯು ಸಾಕ್ಷಾತ್ಕಾರವಾಗಲು ಜ್ಞಾನ ಲಾಭದ ಜೊತೆಗೆ ಲೋಕವ್ಯವಹಾರ ಜ್ಞಾನವೂ ಪರಿಪೂರ್ಣವಾಗಿ ಉಂಟಾಗಬೇಕು.

ಇವುಗಳನ್ನೆಲ್ಲಾ ತಿಳಿಯುವ ಬಗ್ಗೆ ಆ 'ಗುರು' ಎಂಬುವರ ಮಾರ್ಗದರ್ಶನ, ಹಿತನುಡಿ, ದೋಷಗಳ ತಿದ್ದುವಿಕೆ ಇವುಗಳ ಕ್ರಮ ಆಗಿಂದಾಗ್ಗೆ ನಡೆಯುತ್ತಿರಬೇಕು. ಇದನ್ನೇ ದಾಸರು ಹೇಳಿರುವ 'ಮುಕ್ತಿ' ಎಂಬುದನ್ನು ಮನನ ಮಾಡಿಕೊಳ್ಳಬಹುದು. ಇದೇ ಸರಿಯಾದ ಸಮಂಜಸ ಅರ್ಥವೆಂದು ಗ್ರಹಿಸಬಹುದು.

ಗುರುವಿನ ಪಾತ್ರವು ವಿಧೇಯತೆಯುಳ್ಳ ಗುಣಗ್ರಾಹಿಯೂ, ಸದ್ಗುಣಭರಿತನೂ ಆಗಿರುವ ಶಿಷ್ಯನಿಂದ ಶೋಭಿಸುತ್ತವೆ. ಶಿಷ್ಯನಾದವನು ಗುರುವನ್ನು ನಂಬಿ, ಸೇವಕನಂತೆ ಎಡಬಿಡದೆ ಆತನನ್ನು ಅನುವರ್ತಿಸಿಕೊಂಡು, ಭಯ, ಭಕ್ತಿಗಳಿಂದ ಜ್ಞಾನ ಸಂಪಾದಿಸುವುದು ಉತ್ತಮ ಶಿಷ್ಯನ ಲಕ್ಷಣ.

ಗುರು ಸಹ ಉತ್ತಮ ಸಂಸ್ಕೃತಿಯ ತಳಹದಿಯಿಂದ ತನ್ನಾಶ್ರಿತ ಶಿಷ್ಯನಿಗೆ ವಂಚನೆ ಇಲ್ಲದೆ ವ್ಯಾಸಂಗ ಮಾಡಿಸಬೇಕು. ಗುರು ಸ್ವಹಿತಾಕಾಂಕ್ಷಿಯಾಗಿ, ತನಗೆ ಸಂಪಾದನೆಯಾದರೆ ಸಾಕೆಂಬ ಅಭಿಪ್ರಾಯದಿಂದ ಪಾಠ ಹೇಳಬಾರದು. ತನ್ನನ್ನು ನಂಬಿಬಂದಿರುವ ಶಿಷ್ಯನಿಗೆ, ಅವನು ಸರ್ವವಿಧದಲ್ಲೂ ಜ್ಞಾನಾರ್ಥಿಯಾಗಲಿ, ಶ್ರೇಯಸ್ಸುಂಟಾಗಲಿ ಎಂಬುವ ಮನೋಧರ್ಮ ಹೊಂದಿರಬೇಕು ತ್ಯಾಗಮನೋಭಾವದಿಂದ ತನ್ನಲ್ಲಿರುವ ವಿದ್ಯೆಯನ್ನು ಸಂಕೋಚವಿಲ್ಲದೆ, ತೆರೆದ ಮನಸ್ಸಿನಿಂದ ಬೋಧಿಸಬೇಕಾದ್ದು ಸದ್ಗುರುವಿನ ಲಕ್ಷಣ!

ಸ್ವಪರಿಪೂರ್ಣತೆಗೆ ತಕ್ಕ ಗುರು ಸಿಕ್ಕುವುದೂ ಅಪರೂಪ, ನಿಧಾನ. ಗುರುಭಕ್ತಿ ಸಂಪನ್ನನಾದ ಶಿಷ್ಯನಿರುವುದೂ ಅತಿ ವಿರಳ. ಈಗಿನ ಕಾಲದ ಕೆಲವು ಗುರು-ಶಿಷ್ಯರು ಕಪಟಿಗಳು! ನಾಟಕದ ವ್ಯಕ್ತಿಗಳಂತೆ ಅಭಿನಯಿಸುವವರೇ ಆಗಿರುತ್ತಾರೆಂದು ಹೇಳಿದರೆ ತಪ್ಪಲ್ಲ. ಗುರು-ಶಿಷ್ಯರು ಹೀಗಿರಬಾರದು, ತಮ್ಮ ಭಾಗದ ವ್ಯಕ್ತಿಗಳನ್ನು ಬಿಡದೆ, ಆದರ್ಶ ವ್ಯಕ್ತಿಗಳಂತೆ ಗುಣ, ನಡತೆ ಮತ್ತು ಸನ್ಮಾರ್ಗಗಳನ್ನು ದೃಢವಾಗಿ ಪಾಲಿಸುವವರಾಗಬೇಕು.

ಶಿಷ್ಯನು ಸರ್ವ ವಿದ್ಯಾಕಾಂಕ್ಷಿಯಾಗಿ, ಗುರುವಿನ ಮನಒಲಿಯುವಂತೆ ತನ್ನ ಉನ್ನತ ಗುಣಗಳಿಂದ ಸಂತೃಪ್ತಿಪಡಿಸಬೇಕು.

ಹಿಂದಿನ ಕಾಲದಲ್ಲಿದ್ದ ಗುರುಗಳು ಪ್ರತಿಫಲಾಪೇಕ್ಷೆಯಿಲ್ಲದೆ ತಮ್ಮ ಮರೆಹೊಕ್ಕು ಆಶ್ರಯಿಸಿದ ಶಿಷ್ಯನಿಗೆ ಅವರ ಮನಸ್ಸನ್ನು ಕಂಡುಹಿಡಿದು ವಿದ್ಯೆ ಕಲಿಸುತ್ತಿದ್ದರು. ಈಗ ಕಾಲ ಬದಲಾವಣೆಯಾಗಿದೆ, ಸದ್ಗುರು ಯಾರು ಎಂದು ಕಂಡುಹಿಡಿಯುವುದೇ ಕಷ್ಟವಾಗಿದೆ. ಒಳ್ಳೆಯ ಗುರು ಸಿಕ್ಕಿದರೂ ಶಿಷ್ಯರು ಗುರುಭಕ್ತಿಯುಳ್ಳವನಾಗಿ, ನಿಷ್ಕಲ್ಮಷ ಹೃದಯದಿಂದ ವಿದ್ಯೆ ಕಲಿಯುವುದೂ ದುರ್ಲಭವೆನ್ನಬಹುದು.

ಗುರುಗಳು ಶಿಷ್ಯರ ಮತ್ತು ಶಿಷ್ಯರು ಗುರುಗಳ ಮನೋಗತಗಳನ್ನು ಅರಿಯಲು ಇಂಗಿತ ಜ್ಞಾನವಿರಬೇಕು, ಹೀಗಿರುವುದು ಅಪರೂಪ. ಗುರು ಶಿಷ್ಯರ ಹೃದಯದ ಆಶೆ, ಆಕಾಂಕ್ಷೆಗಳನ್ನು ಗ್ರಹಿಸುವ ಚಾಣಾಕ್ಷತೆ ಇದ್ದು, ಶಿಷ್ಯರಿಗೆ ವಿದ್ಯಾಬೋಧೆ ಮಾಡುವ ಗುರುವಿಗೆ ಸಕಲ ಶ್ರೇಯಸ್ಸುಂಟು.

ಗುರುಭಕ್ತಿಯನ್ನು ಹಣದಿಂದ ಕೊಳ್ಳಲಾಗುವುದಿಲ್ಲ. ಅದು ಶಿಷ್ಯನ ಮನಸ್ಸಿನಾಳದಿಂದ ಉಕ್ಕಿಬರಬೇಕು. ಹೇಳದೇ ಇದ್ದರೂ ಪೂರ್ಣ ಪಾಂಡಿತ್ಯವಿರುವ ಗುರುವಿಗೆ ಊಹಿಸಿ ತಿಳಿದುಕೊಳ್ಳುವ ಜಾಣ್ಮೆ, ಕುಶಲಮತಿ ಇರುವುದನ್ನು ಕೆಲವು ವೇಳೆ ಕಾಣುತ್ತೇವೆ, ಬುದ್ಧಿ ಕರ್ಮಾನುಸಾರಿಣಿ ಎಂದಲ್ಲವೇ?

ಗುರುಭಕ್ತಿಯ ನಿಜವಾದ ಅರ್ಥ ತಿಳಿದು ನಡೆದುಕೊಳ್ಳಲು ಪ್ರಯತ್ನಿಸಬೇಕು. ಹಾಗೆಯೇ ಯೋಚಿಸಿದರೆ ಆ 'ಗುರು' ಮಠಗಳಲ್ಲಿ ವಿರಕ್ತರಾದ ಪೀಠಾಧಿಪತಿಗಳೂ ಆಗಬಹುದು, ಶಾಲಾ ಕಾಲೇಜುಗಳಲ್ಲಿ ಕಲಿಸುವವರೂ ಗುರುಗಳೇ! ಇವರು ಮಾತ್ರವಲ್ಲದೆ ಆ 'ಗುರು' ಪುರಾಣೀಕನಾಗಿರಬಹುದು; ವೇದ, ವೇದಾಂಗಶಾಸ್ತ್ರ ಪಾರಂಗತನಾಗಿರಬಹುದು; ನ್ಯಾಯ, ತರ್ಕ, ಮೀಮಾಂಸ ತಜ್ಞನಾಗಿರಬಹುದು; ರಾಜತಂತ್ರ, ನೀತಿನಿಪುಣನಾಗಿರಬಹುದು; ಯಜ್ಞ ಯಾಗಾದಿಗಳನ್ನು ನಡಿಸುವ ಪ್ರಾಜ್ಞರೂ ಇರಬಹುದು; ಇವರೆಲ್ಲರೂ ಸಹ 'ಗುರುಸ್ಥಾನ'ದಲ್ಲಿರುವವರೇ ಆಗಿರುತ್ತಾರೆ. ಇವರೆಲ್ಲರನ್ನೂ ಸಹ ವಿದ್ಯಾಗುರುವಿನಂತೆ 'ಗುರು' ಎಂಬ ಸಮಭಾವದಿಂದ ನೋಡಬೇಕು. ಇವರೆಲ್ಲರೂ 'ಗುರು' ಸ್ಥಾನಕ್ಕೆ ಪಾತ್ರರು!

ಶಿಷ್ಯವೃತ್ತಿಯಲ್ಲಿರುವ ವ್ಯಾಸಂಗಿಯೂ, ಧರ್ಮಮಾರ್ಗದಿಂದ, ತನ್ನ ಏಳಿಗೆಯನ್ನು ಬಯಸಿ, ವಿದ್ಯೆಯು ಸಾರ್ಥಕವಾಗಲು, ಗುರುವಿನ ಸೇವಾತತ್ಪರನಾಗಿ, ವಿದ್ಯಾರ್ಜನೆ ಮಾಡುವುದು ಸೂಕ್ತವೂ, ನೀತಿಯುಕ್ತವೂ ಆಗಿದೆ.

ಒಟ್ಟಿನಲ್ಲಿ ಹೇಳಬೇಕೆಂದರೆ ಶಿಷ್ಯನು ಸದ್ಗುರುವಿನ ಮೂಲಕ ಕಲಿತ ವಿದ್ಯೆ ಸಾರ್ಥಕವೆನಿಸಿ, ಶಿಷ್ಯನ ಏಳಿಗೆ, ಗೌರವ, ಉಚ್ಚಸ್ಥಾನ, ಪೂಜ್ಯತೆ ಉಂಟಾಗುವುದೆಂಬುದು ಸತ್ಯಸಂಗತಿಯಾಗಿದೆ.

# ಆಹಾರ ಪದಾರ್ಥಗಳ ಬೆಲೆ ಏರಿಕೆ ಒಂದು ವಿವೇಚನೆ

—ಡಿ. ವೆಂಕಟರಾಮ್, ಎಂ.ಎ.
ಪ್ರಾಚಾರ್ಯರು, ಸರ್ಕಾರಿ ಪ್ರಥಮ ದರ್ಜೆ ಮಹಾ ವಿದ್ಯಾಲಯ, ಸಕಲೇಶಪುರ.

ಹಿಂದುಳಿದ ರಾಷ್ಟ್ರಗಳು ಸಾಮಾನ್ಯವಾಗಿ ಎದುರಿಸಬೇಕಾದ ಅಸಂಖ್ಯಾತ ಸಮಸ್ಯೆಗಳಲ್ಲಿ ಜನತೆಯ ನಿತ್ಯೋಪಯೋಗಿ ವಸ್ತುಗಳ ಬೆಲೆ ಏರಿಕೆಯೂ ಒಂದು. ಭಾರತದಲ್ಲಿ ಇತ್ತೀಚೆಗೆ ಏರುತ್ತಿರುವ ಕೃಷಿವಸ್ತುಗಳ ಬೆಲೆ ಏರಿಕೆಯು ಒಂದು ಗಂಭೀರ ಸಮಸ್ಯೆಯಾಗಿ ಪರಿಣಮಿಸಿದೆ. ಕಳೆದ ಒಂದು ದಶಕದ ಅವಧಿಯಲ್ಲಿ ಹೆಚ್ಚುಕಡಿಮೆ ಎಲ್ಲಾ ಕೃಷಿ ವಸ್ತುಗಳ ಬೆಲೆಗಳು ಏರಿವೆ. ಅದರಲ್ಲೂ ಜನಸಾಮಾನ್ಯರ ದಿನಬಳಕೆಯ ವಸ್ತುಗಳ ಬೆಲೆ ಏರಿ ಇಂದು ಗೃಹಿಣಿಯು ಕುಟುಂಬದ ಆಯವ್ಯಯಗಳನ್ನು ಸರಿತೂಗಿಸ ಲಾಗದೆ ಕಳವಳಗೊಂಡಿದ್ದಾಳೆ. ತನ್ನ ಗಂಡನ ವರಮಾನದಲ್ಲಿ ಮನೆಯ ಅಗತ್ಯಗಳೆಲ್ಲ ವನ್ನೂ ಕೊಳ್ಳಲು ಎಷ್ಟೇ ಚಾತುರ್ಯ ತೋರಿಸಿದರೂ ಅದು ಆಕೆಗೆ ಸಾಧ್ಯವಾಗುತ್ತಲೇ ಇಲ್ಲ. ಕುಟುಂಬದ ನೂರಾರು ಪಟ್ಟಿಗಳ ವೆಚ್ಚ ಭಾರದಿಂದ ಬೆಂದು ಬೇಗುದಿಗೊಳ್ಳು ತ್ತಿರುವ ಗೃಹಿಣಿಯ ಬಾಯಿಂದ ಬೆಲೆಏರಿಕೆಯ ಕಥೆಯನ್ನು ಕೇಳುವುದೆಂದರೆ ಅದು ಬರಗಾಲದ ಕಥೆಯಂತೆಯೇ ಕರುಣಾಜನಕ. ದೇಶದಲ್ಲಿ ಎಲ್ಲೆಲ್ಲೂ ಬೆಲೆ ಏರಿಕೆಯ ವಿರುದ್ಧ ಕೂಗು ಕೇಳಿಬರುತ್ತಿದೆ. 1974 ರಲ್ಲಿ ಗೋಧಿಯ ಬೆಲೆ 1 ಕೆ.ಜಿ.ಗೆ 1½ ರೂ. ಗಳಿಂದ 2 ರೂ.ಗಳವರೆಗೆ ಇತ್ತು. ಅಕ್ಕಿಯ ಬೆಲೆ 1 ಕೆ.ಜಿ.ಗೆ 2½ ರೂ ಗಳಿಂದ 3¼ ರೂ.ಗಳವರೆಗೆ ಇತ್ತು. ಸಕ್ಕರೆಯ ಬೆಲೆ ಪಡಿತರ ಅಂಗಡಿಗಳಲ್ಲಿ 1 ಕೆ.ಜಿ.ಗೆ 2¼ ರೂ. ಇತ್ತು ಆದರೆ ಈಗ 1 ಕೆ.ಜಿ. ಗೋಧಿಯ ಬೆಲೆ 3 ರೂ ಗಳಿಗ ಅಕ್ಕಿಯ ಬೆಲೆ 4 ರೂ. 80 ಪೈಸೆಗಳಿಂದ 5 ರೂ.ಗಳಿಗೂ, ಒಂದು ಕೆ.ಜಿ ಸಕ್ಕರೆ ಬೆಲೆ ಪಡಿತರ ಅಂಗಡಿಗಳಲ್ಲಿ 4 ರೂ.ಗಳು ಹಾಗೂ ಮುಕ್ತ ಮಾರುಕಟ್ಟೆಯಲ್ಲಿ 5½ ರೂ.ಗಳಿಗೆ ಏರಿದೆ. ಕೇವಲ ಅಕ್ಕಿ, ಗೋಧಿ, ಸಕ್ಕರೆ ಬೆಲೆಗಳು ಮಾತ್ರವೇ ಅಲ್ಲದೆ ಎಲ್ಲಾ ಕೃಷಿ ವಸ್ತುಗಳ ಬೆಲೆಗಳೂ ಏರಿವೆ. ಜೀವನಾಧಾರವಾದ ದಿನಸಿ ಸಾಮಾಗ್ರಿಗಳ ಬೆಲೆ ಏರಿಕೆಯ ಬಗ್ಗೆ ಜನಸಾಮಾನ್ಯರ ಮಟ್ಟದಲ್ಲಿ ಅತೃಪ್ತಿ ವ್ಯಾಪಕವಾಗಿ ಮೂಡಿರುವಾಗ ಎಲ್ಲಾ ಸರಕಾರ ಗಳೂ ನಿಸ್ಸಹಾಯಕವಾಗಿ ನೋಡುತ್ತಾ, ಕೆಲವು ಹಂತಗಳಲ್ಲಿ, ಕೆಲವು ವರ್ಗದ ಜನ ರಿಗೆ ಸಾಂತ್ವನ ನೀಡುವ ಪ್ರಯತ್ನ ನಡೆಸಿವೆ. ಭಾರತದಂತಹ ನಿರಂತರ ತಾಪತ್ರಯ ಭೂಷಿತ ದೇಶಗಳಲ್ಲಿ ಈ ಶಾಪವನ್ನು ತಡೆಯಲಾರದ ಜನಸ್ತೋಮ ಅಲ್ಲಲ್ಲಿನ ಸರಕಾರ ಗಳನ್ನು ಎತ್ತಿ ಹಾಕುವುದರಿಂದಲೋ, ಅವುಗಳ ಆರ್ಥಿಕ ಚಿಂತನೆಯಲ್ಲಿ ಮಾರ್ಪಾಟು ಗಳನ್ನು ತಂದುಕೊಳ್ಳುವುದರ ಮೂಲಕವೋ ಸಮಸ್ಯೆಗೆ ಉತ್ತರವನ್ನು ಅರಸುತ್ತಿದ್ದಾರೆ.

ಕಾರಣಗಳು: ಕೃಷಿ ವಸ್ತುಗಳ ಬೆಲೆ ಏರಿಕೆಗೆ ಮುಖ್ಯ ಕಾರಣವೆಂದರೆ ಆಹಾ ಧಾನ್ಯಗಳ ಪೂರೈಕೆಯು ಬೇಡಿಕೆಗಿಂತ ಕಡಿಮೆ ಇರುವುದು. ಆಹಾರ ಧಾನ್ಯಗ ಪೂರೈಕೆಯಲ್ಲಿ ಹೆಚ್ಚಳ ಕಂಡುಬರದಿರಲು ಮುಖ್ಯ ಕಾರಣ ಕೃಷಿ ಕ್ಷೇತ್ರದಲ್ಲಿ ನಿರ್ಧಾ ಸಿದ ಗುರಿಗಳನ್ನು ಮುಟ್ಟದಿರುವುದು, ಗುರಿಗಳನ್ನು ಮುಟ್ಟದಿರಲು ಮುಖ್ಯ ಕಾರಣ ಹವಾಮಾನದ ಪ್ರತಿಕೂಲ, ಸಣ್ಣ ರೈತರುಗಳನ್ನು ನಿರ್ಲಕ್ಷಿಸಿರುವುದು, ಅವರು ಬೆಳೆ ಬೆಳೆಗೆ ಯೋಗ್ಯ ಬೆಲೆ ದೊರೆಯದಿರುವುದು, ಅಗತ್ಯ ಕಚ್ಚಾ ವಸ್ತುಗಳಾದ ಕೃತ ಗೊಬ್ಬರ, ಬಿತ್ತನೆ ಬೀಜಗಳ ಅಭಾವ, ಸಾಲಗಳು ಸಕಾಲದಲ್ಲಿ ರೈತರಿಗೆ ಸೇರದಿರ ವುದು ಇತ್ಯಾದಿ.

ಭಾರತದಲ್ಲಿ 1951 ರಿಂದೀಚೆಗೆ ಜನಸಂಖ್ಯೆಯು ಪ್ರತಿವರ್ಷ ಶೇ. 2.5 ರಷ್ಟು ಬೆಳೆಯುತ್ತಿದೆ. ಆದರೆ ಆಹಾರ ಧಾನ್ಯಗಳು ಅಷ್ಟೇ ತ್ವರಿತಗತಿಯಿಂದ ಪೂರೈಸಲು ಸಾಧ್ಯವಿಲ್ಲ, ಜನರು ಹೆಚ್ಚಿದಂತೆಲ್ಲಾ ಆಹಾರ ಧಾನ್ಯಗಳಿಗೆ ಬೇಡಿಕೆಯೂ ಹೆಚ್ಚುವ ದೆಂಬುದನ್ನು ಹೇಳಬೇಕಾಗಿಲ್ಲ. ಇದರೊಂದಿಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಆಡಳಿತ ವೆಚ್ಚದಲ್ಲಿ ಸಿದ್ಧವಾದ ಏರಿಕೆ ಕಂಡುಬರುತ್ತಿದೆ. ಈ ರೀತಿಯ ವೆಚ್ಚ ಹೆಚ್ಚಾ ದಂತೆಲ್ಲಾ ಜನರ ಬಳಿ ಹೆಚ್ಚು ಹಣ ಸೇರಿ ವಸ್ತುಗಳಿಗೆ ಬೇಡಿಕೆ ಹೆಚ್ಚಾಗುತ್ತದೆ. ಬ್ಯಾಂಕುಗಳು ಲಾಭಕ್ಕಾಗಿ ಹೆಚ್ಚು ಸಾಲ ನೀಡುತ್ತವೆ. ಇದರಿಂದ ಜನರ ಬಳಿ ಮತ್ತಷ್ಟು ಹಣ ಸೇರಿ ಅವರ ಕೊಳ್ಳುವ ಸಾಮರ್ಥ್ಯವೂ ಹೆಚ್ಚುತ್ತದೆ ಇದರಿಂದ ಬೆಲೆ ಏರುತ್ತದೆ. ಆರ್ಥಿಕಾಭಿವೃದ್ಧಿ ಹೊಂದಲು ಸರಕಾರಿ ಹಾಗೂ ಖಾಸಗಿ ರಂಗಗಳು ಕೈಗಾರಿಕೆಗಳಲ್ಲಿ ಹೆಚ್ಚು ಬಂಡವಾಳವನ್ನು ತೊಡಗಿಸುತ್ತವೆ. ಹೆಚ್ಚು ಬಂಡವಾಳ ಹೂಡಿಕೆಯು ಹೆಚ್ಚು ವಸ್ತುಗಳ ಬೇಡಿಕೆಗೆ ಅನುವು ಮಾಡಿಕೊಡುತ್ತದೆ. ಬೇಡಿಕೆ ಹೆಚ್ಚಿದಂತೆಲ್ಲಾ ಬೆಲೆಗಳೂ ಏರಲಾರಂಬಿಸುತ್ತವೆ. ಏಕೆಂದರೆ ವಸ್ತುಗಳು ಇದ್ದಕ್ಕಿ ದ್ದಂತೆ ಉತ್ಪಾದನೆಯಾಗುವುದಿಲ್ಲ. ಇದರಿಂದ ವಸ್ತುಗಳ ಬೆಲೆಗಳು ಏರುತ್ತವೆ, ಹೀಗೆ ಬೇಡಿಕೆಯ ಒತ್ತಡವು ಬೆಲೆ ಏರಿಕೆಗೆ ಕಾರಣವಾಗುತ್ತದೆ.

ಬೆಲೆ ಏರಿದಂತೆ ಜೀವನ ವೆಚ್ಚ ಹೆಚ್ಚಾಗಿ ಉದ್ಯೋಗ ಮಾಡುವವರ ವೇತನ, ತುಟ್ಟಿಭತ್ಯ, ನಗರಭತ್ಯ ಇತ್ಯಾದಿಗಳನ್ನು ಹೆಚ್ಚಿಸಲೇಬೇಕಾಗುತ್ತದೆ. ಇದಕ್ಕಾಗಿ ಸರ ಕಾರ ಹೆಚ್ಚು ಹಣವನ್ನು ವೆಚ್ಚಮಾಡಬೇಕಾಗುತ್ತದೆ. ಸರಕಾರದ ವೆಚ್ಚಗಳು ಚಲಾ ವಣೆಯಲ್ಲಿರುವ ಹಣವನ್ನು ಹೆಚ್ಚಿಸುತ್ತವೆ. ಅದಕ್ಕೆ ತಕ್ಕಂತೆ ಉತ್ಪಾದನೆ ಏರದಿದ್ದರೆ ಹಣಕ್ಕೆ ಏನು ಬೆಲೆ ಇರುತ್ತದೆ? ಉತ್ಪಾದನೆ ಕಡಿಮೆಯಾಗಿ ಹಣದ ಚಲಾವಣೆ ಅಧಿಕ ಗೊಂಡರೆ ಹಣಕ್ಕೆ ಕೊಳ್ಳುವ ಶಕ್ತಿ ಎಲ್ಲಿ ಉಳಿಯುತ್ತದೆ? ಆದ್ದರಿಂದಲೇ ಪ್ರತಿತಿಂಗಳೂ ಬೆಲೆಗಳು ಏರಲಾರಂಭಿಸಿವೆ. ಅಲ್ಲದೆ ವಿಪರೀತ ಹಣ ಚಲಾವಣೆಯಿಂದ; ಉತ್ಪಾದನೆ ಕುಸಿತದಿಂದ ಕಾಳಸಂತೆ, ಕಳ್ಳಹಣದ ನಿರ್ಮಾಣವಾಗುತ್ತದೆ. ನೈಸರ್ಗಿಕ ಅಂಶ

ಗಳಾದ ಪ್ರವಾಹಗಳು, ಭೂಕಂಪಗಳು, ಕ್ಷಾಮಗಳು ದೇಶದಲ್ಲಿನ ಸಾಮಾನ್ಯ ಉತ್ಪಾದನಾ ಕ್ರಿಯೆಗೆ ಅಡ್ಡಿಯನ್ನುಂಟು ಮಾಡುವುದರಿಂದಲೂ ಕೆಲವಸ್ತುಗಳಿಗೆ ಅಭಾವ ಉಂಟಾಗಿ ಅವುಗಳ ಬೆಲೆ ಏರುತ್ತದೆ. ಆ ವಸ್ತುಗಳು ಅತ್ಯವಶ್ಯಕ ಮೂಲ ವಸ್ತುಗಳಾದರೆ ಅಥವಾ ಕೈಗಾರಿಕಾ ಕಚ್ಚಾ ವಸ್ತುಗಳಾದರೆ ಅವುಗಳ ಬೆಲೆ ಮತ್ತಷ್ಟು ಏರುತ್ತದೆ. ಈ ಏರುವಿಕೆಯ ಪರಿಸ್ಥಿತಿಗೆ ಶ್ರೀ ಸಾಮಾನ್ಯರು ಹೆಚ್ಚಾಗಿ ಬಲಿಯಾಗುತ್ತಾರೆ.

ಒಟ್ಟಿನಲ್ಲಿ ಹಣದುಬ್ಬರ, ನಿರುದ್ಯೋಗ, ಕೃಷಿರಂಗದ ಉತ್ಪಾದನೆ ನಿರೀಕ್ಷಿತ ಮಟ್ಟದಷ್ಟು ಏರದಿರುವುದು, ಸರಕಾರದ ಕಾರ್ಯಯಂತ್ರದ ಅವ್ಯವಸ್ಥೆ–ಈ ನಾಲ್ಕು ಕಾರಣಗಳ ಫಲಿತಾಂಶವೇ ಬೆಲೆ ಏರಿಕೆ. ಆದರೆ ಬೆಲೆ ಏರಿಕೆಗೆ ಸರಕಾರ ಹೊಣೆ ಕೆಲ ಮಂದಿ ಎಡಗುಂಪಿನವರು ನೀಡುತ್ತಿರುವ ಕಾರಣಗಳು ಈ ರೀತಿ ಇವೆ. ಬೆಲೆಯು ಇಡೀ ವಿಶ್ವದಲ್ಲೇ ಎಲ್ಲರಾಷ್ಟ್ರಗಳಲ್ಲೂ ಏರುತ್ತಿರುವುದರಿಂದ ಭಾರತವೊಂದಕ್ಕೇ ಇದು ಸೀಮಿತವಲ್ಲ. ಅಂದರೆ ಈ ವಾದದ ಮೂಲಕ ಬೆಲೆ ಏರಿಕೆಯು ವಿಶ್ವದ ನಡವಳಿಕೆ ಎಂದು ಸ್ಥಿರ ಪಡಿಸಲು ಪ್ರಯತ್ನಿಸಲಾಗುತ್ತಿದೆ. ಆದರೆ ಇದು ಸುಳ್ಳು. ಏಕೆಂದರೆ ಭಾರತದಲ್ಲಿ ವಿಶ್ವಮಟ್ಟಕ್ಕಿಂತ ಮೂರು–ನಾಲ್ಕು ಪಟ್ಟು ಅಧಿಕವಾಗಿ ಬೆಲೆ ಏರಿದೆ. ಶ್ರೀಮಂತ ರಾಷ್ಟ್ರಗಳಲ್ಲಿ ಬೆಲೆ ಏರಿಕೆಯನ್ನು ತಡೆದು ಕೊಳ್ಳುವ ಶಕ್ತಿಯು ಜನರಿಗೆ ಸಹಜವಾಗಿಯೇ ಇರುತ್ತದೆ. ಆದರೆ ಮೊದಲೇ ಬಡತನದಲ್ಲಿರುವ ನಮ್ಮ ಜನಕ್ಕೆ ಈ ಶಕ್ತಿ ಎಲ್ಲಿದೆ. ? ಮತ್ತೊಂದು ವಾದವೆಂದರೆ ಅಭಿವೃದ್ಧಿ ಗೊಳ್ಳುತ್ತಿರುವ ರಾಷ್ಟ್ರಗಳಲ್ಲಿ ಬೆಲೆ ಏರಿಕೆ ಅನಿವಾರ್ಯ ಎಂಬುದು. ಈವಾದವೂ ಸಹ ಸುಳ್ಳು. ಥೈಲ್ಯಾಂಡ್, ಇರಾನ್, ಇಸ್ರೇಲ್ ನಂತಹ ಅಭಿವೃದ್ಧಿಗೊಳ್ಳುತ್ತಿರುವ ರಾಷ್ಟ್ರಗಳಲ್ಲಿ ಬೆಲೆ ಏರಿಕೆಯು ವರ್ಷಕ್ಕೆ ಶೇ.% 2ರಷ್ಟು ಮಾತ್ರವಿದೆ. ಈ ಸಾಧನೆ ಹೇಗೆ ಸಾಧ್ಯ. ಹಾಗೆ ನೋಡಿದರೆ; ನಮ್ಮ ಬೆಲೆ ಏರಿಕೆಯನ್ನು ಮುಂದುವರಿದ ರಾಷ್ಟ್ರಗಳ ಬೆಲೆ ಏರಿಕೆಯೊಂದಿಗೆ ಹೋಲಿಸುವುದೇ ತಪ್ಪು. ಆದೇಶಗಳಲ್ಲಿ ಬೆಲೆ ಏರಿಕೆ ಇದ್ದರೂ ಉತ್ಪಾದನೆಯ ಕೊರತೆ ಇಲ್ಲ. ನಮ್ಮಲ್ಲಿ ಕನಿಷ್ಠ ಆಗತ್ಯ ಮಟ್ಟವನ್ನು ತಲುಪುವ ಮುನ್ನವೇ ಬೆಲೆ ಏರಿಕೆ ತಲೆದೋರಿದೆ.

**ಪರಿಣಾಮಗಳು:** ಕೃಷಿ ವಸ್ತುಗಳ ಬೆಲೆಗಳು ಏರಿದಂತೆಲ್ಲಾ ಹಣದ ಕೊಳ್ಳುವ ಶಕ್ತಿ ಕುಗ್ಗುತ್ತದೆ. ಅನೇಕ ಜನರು ನಿಗದಿಯಾದ ಆದಾಯವನ್ನು ಹೊಂದಿರುವುದರಿಂದ ಅವರಿಗೆ ಬೇಕಾದಷ್ಟು ಧಾನ್ಯಗಳನ್ನು ಹೆಚ್ಚಿನ ಬೆಲೆ ತೆತ್ತು ಪಡೆಯಲಾಗುವುದಿಲ್ಲ. ಬೆಲೆಗಳು ನಿರಂತರವಾಗಿ ಏರಿದಂತೆ ಬಡವರ ಜೀವನ ದುಸ್ಸಹವಾಗುತ್ತದೆ. ಜೀವನ ವೆಚ್ಚ ಏರಿದಂತೆ ಕಾರ್ಮಿಕರು ಹಾಗೂ ಕೂಲಿಕಾರರು ತೊಂದರೆಗೆ ಒಳಗಾಗುತ್ತಾರೆ. ಒಂದು ವೇಳೆ ಕೂಲಿದರ ಹೆಚ್ಚಾದರೂ ಅದು ನಾಗಾಲೋಟದಿಂದ ಏರುತ್ತಿರುವ ಬೆಲೆಗಳ ಪ್ರಮಾಣಕ್ಕೆ ಸರಿತೂಗುವುದಿಲ್ಲ. ಒಬ್ಬ ಕಾರ್ಮಿಕ ಒಂದು ದಿನವೆಲ್ಲಾ ದುಡಿದರೂ

ಅವನಿಗೆ ಸಿಗುವ ಕೂಲಿ 10 ರೂ.ಗಳಿದ್ದರೆ, ಅವನ ಮನೆಯಲ್ಲಿ ನಾಲ್ಕೈದು ಜನರಿದ್ದು ಅವನು ಒಂದು ಕೆ.ಜಿ. ರಾಗಿಗೆ 1.60 ಪೈಸೆ ಕೊಡಬೇಕು. ಇದರಿಂದ ಅವನು ತರಕಾರಿಗಳನ್ನು ಮತ್ತು ಉಳಿದ ವಸ್ತುಗಳನ್ನು ಕೊಳ್ಳಲಾಗುವುದೇ? ಮಕ್ಕಳಿಗೆ ಹಾಲು ಹಣ್ಣುಗಳನ್ನು ಕೊಳ್ಳಲು ಸಾಧ್ಯವೇ? ಹೀಗೆ ಬೆಲೆ ಏರಿಕೆಯಿಂದ ನಿರ್ದಿಷ್ಟ ಆದಾಯ ಹೊಂದಿರುವ ಗ್ರಾಹಕರ ಹಾಗೂ ಕಡಿಮೆ ವೇತನ ಪಡೆಯುವ ಕಾರ್ಮಿಕ ವರ್ಗದವರಲ್ಲಿ ಬೆಲೆ ಏರಿಕೆಯಿಂದ ಸಂಕಷ್ಟಗಳು ಅಪರಿಮಿತವಾಗಿ ಬೆಳೆಯುತ್ತವೆ. ಇಂದು ಎಲ್ಲಾ ಕೃಷಿವಸ್ತುಗಳ ಬೆಲೆಯು ಬಹಳಷ್ಟು ಏರಿದ್ದು, ಇನ್ನೂ ಏರುತ್ತಲೇ ಇರುವುದರಿಂದ ಶ್ರೀ ಸಾಮಾನ್ಯರ ಸ್ಥಿತಿಯಂತೂ ತೀರಾ ಶೋಚನೀಯವಾಗಿದೆ ಆದರೆ ಕೂಲಿಗಾರರಿಗೂ-ಶ್ರೀಮಂತರಿಗೂ ಬೆಲೆಏರಿಕೆಯ ಕಾವು ಅಷ್ಟಾಗಿ ತಟ್ಟುವುದಿಲ್ಲವೆನ್ನುವುದು ಸಾರ್ವತ್ರಿಕ ಅಭಿಪ್ರಾಯ. ಏಕೆಂದರೆ, ಶ್ರೀಮಂತ ವರ್ಗಗಳು ತಮ್ಮ ಅಗತ್ಯಗಳಿಗಾಗಿ ತ್ಯಾಗ ಮಾಡಬೇಕಾದಂತಹ ಪರಿಸ್ಥಿತಿ ಏನೂ ಇಲ್ಲ. ಕೂಲಿಗಾರರಿಗೆ ಅವರ ಜೀವನ ವಿಧಾನದಿಂದಲೂ ಅಗತ್ಯಗಳು ಪೂರೈಕೆಯಾಗುತ್ತಿವೆ. ಹಲವು ಜೀವನ ಸೌಕರ್ಯಗಳನ್ನು ತುಂಬಲು ಬಯಸುವ ಮಧ್ಯಮವರ್ಗದವರಲ್ಲಿ ಈಗ ಬೆಲೆ ಏರಿಕೆಯ ಕಾವಿನಿಂದ ಜೀವನದೃಷ್ಟಿ ವಿಧಾನವೇ ಬದಲಾಗಿದೆ.

ಉತ್ಪಾದಕ ಮತ್ತು ಗ್ರಾಹಕ ಇವರೀರ್ವರೂ ದೇಶದ ಅತಿಮುಖ್ಯ ವ್ಯಕ್ತಿಗಳು. ಆದರೆ ಇವರಿಬ್ಬರನ್ನೂ ಇಂದು ಅಲಕ್ಷಿಸಲಾಗಿದೆ ಬೆಲೆಏರಿಕೆಯು ಇವರಿಬ್ಬರ ಕಲ್ಯಾಣಕ್ಕೆ ಧಕ್ಕೆ ತಂದೊಡ್ಡಿದೆ. ಬಿತ್ತುವ ಸಮಯದಲ್ಲಿ ಏರುವ ಬೆಲೆಗಳ ಮತ್ತು ಸುಗ್ಗಿಯ ಸಮಯದಲ್ಲಿ ಇಳಿಯುವ ಬೆಲೆಗಳ ಅಸ್ಥಿರತೆಯಿಂದ ಉತ್ಪಾದಕರಾದ ರೈತರು ಹಾನಿಗೊಳಗಾಗುತ್ತಾರೆ. ಇದರಿಂದ ಕೃಷಿ ಉತ್ಪನ್ನ ಇಳಿದು ವ್ಯಕ್ತಿಗಳ ಆದಾಯ ಕಡಿಮೆಯಾಗುತ್ತದೆ. ಇದರಿಂದ ಗ್ರಾಹಕರ ಜೀವನಮಟ್ಟ ಕುಸಿಯತೊಡಗುತ್ತದೆ. ಬೆಲೆ ಏರಿಕೆಯಿಂದ ಉತ್ಪಾದನಾ ಖರ್ಚು ಹೆಚ್ಚುವುದರಿಂದ ಕೃಷಿಯನ್ನೇ ಅವಲಂಬಿಸಿರುವ ಉದ್ದಿಮೆಗಳಿಗದ ಭಾರಿ ಪೆಟ್ಟು ತಗಲುತ್ತದೆ. ಬೆಲೆ ಏರಿಕೆಯಿಂದ ವ್ಯಾಪಾರಸ್ಥರು ಮತ್ತು ಕೈಗಾರಿಕೋದ್ಯಮಿಗಳು ಮಾತ್ರ ಲಾಭ ಪಡೆದು ದುಂಡಗಾಗುತ್ತಾರೆ. ವ್ಯಾಪಾರಸ್ಥರು ಕೊರತೆ ಕಂಡುಬಂದ ವಸ್ತುಗಳನ್ನು ಬಚ್ಚಿಟ್ಟು ಕಳ್ಳಪೇಟೆಯಲ್ಲಿ ಮಾರಾಟ ಮಾಡಿ ಅಧಿಕ ಲಾಭ ಪಡೆಯುತ್ತಾರೆ. ಶ್ರೀಮಂತ ರೈತರು ಹಾಗೂ ಭೂಮಾಲೀಕರು ಹೆಚ್ಚು ಕೃಷಿ ಉತ್ಪನ್ನಗಳನ್ನು ಉತ್ಪಾದಿಸಿ, ಹೆಚ್ಚು ಬೆಲೆ ಪಡೆದು ಮತ್ತಷ್ಟು ಶ್ರೀಮಂತರಾಗುತ್ತಾರೆ. ಆದರೆ ಬಡರೈತರ ಸ್ಥಿತಿ ಇನ್ನಷ್ಟು ಅಧೋಗತಿಗಿಳಿಯುತ್ತದೆ. ಬೆಲೆ ಏರಿಕೆಯಿಂದ ಕೆಲಸಮಾಡುವ ಕಾರ್ಮಿಕರಿಗಾಗಲಿ ಅಥವಾ ವಸ್ತುಗಳನ್ನು ಅನುಭೋಗಿಸುವ ಮಧ್ಯಮ ವರ್ಗದ ಗ್ರಾಹಕರಿಗಾಗಲಿ ಯಾವ ಬಗೆಯ ಲಾಭವೂ ಇಲ್ಲ. ಅತ್ಯಾವಶ್ಯಕ ವಸ್ತುಗಳಾದ ಹಾಲು, ಮೊಸರು, ಹಣ್ಣು, ಸಕ್ಕರೆ ಇತ್ಯಾದಿಗಳಿಂದಲೂ ಅವರು ವಂಚಿತರಾಗಬೇಕಾದ ಪರಿಸ್ಥಿತಿ ಒದಗುತ್ತದೆ.

ಕೃಷಿ ವಸ್ತುಗಳ ಬೆಲೆ ಏರಿಕೆಯಿಂದ ಸಾಮಾನ್ಯ ಮನುಷ್ಯರಿಗೇ ಅಲ್ಲದೆ ಸರಕಾರಕ್ಕೂ ಹಾನಿಯಾಗುತ್ತದೆ. ಪೇಟೆಯಲ್ಲಿ ಸರಕಾರ ಅನೇಕ ವಸ್ತುಗಳನ್ನು ಹೆಚ್ಚು ಬೆಲೆ ಕೊಟ್ಟು ಕೊಳ್ಳಬೇಕಾಗುತ್ತದೆ. ಹಣದ ಕೊರತೆ ತುಂಬಲು ಸಾಲಮಾಡಬೇಕಾಗುತ್ತದೆ. ಇದರಿಂದ ದೇಶದ ಅಭಿವೃದ್ಧಿ ಕುಂಠಿತಗೊಳ್ಳುತ್ತದೆ, ದೇಶದ ಸಂಪತ್ತಿನ ಬೆಳವಣಿಗೆಗೆ ಧಕ್ಕೆ ತಗಲುತ್ತದೆ. ಹಣದ ಮೌಲ್ಯ ಕುಗ್ಗಿ ಆದಾಯ ಮತ್ತು ವೆಚ್ಚಗಳ ಅಂತರ ಅಧಿಕಗೊಳ್ಳುತ್ತದೆ. ಸಾಮಾಜಿಕ ಜೀವನದಲ್ಲಿನ ಮೇಲೂ ಕೀಳುಗಳ ಕಂದರ ದಿನ ದಿನಕ್ಕೂ ಆಳವಾಗುತ್ತದೆ. ಉಳಿತಾಯಮಾಡಿ ರಾಷ್ಟ್ರೀಯ ಸಂಪನ್ಮೂಲಗಳ ಸದೃಢತೆಗೆ ನೆರವಾಗಬೇಕೆಂಬ ಭಾವನೆ ಜನತೆಯಿಂದ ದೂರವಾಗುತ್ತದೆ.

ಪರಿಹಾರಮಾರ್ಗ : ತೀವ್ರ ಬೆಲೆ ಏರಿಕೆಯು ಅಪಾಯಕಾರಿ ಪ್ರಭಾವ ಬೀರುತ್ತದೆಂಬುದು ಸರ್ವವಿಧಿತ ಮತ್ತು ಅದನ್ನು ಹತ್ತಿಕ್ಕುವುದು ತೀರಾ ಅಗತ್ಯ. ಅದರಲ್ಲೂ ಕೃಷಿ ಉತ್ಪನ್ನದ ಬೆಲೆಗಳ ಸ್ಥಿರತೆಯನ್ನು ಕಾಪಾಡಿಕೊಂಡು ಬರುವುದು ಕೃಷಿ ಅಭಿವೃದ್ಧಿಯ ದೃಷ್ಟಿಯಿಂದ ಅತಿ ಅವಶ್ಯ. ಏಕೆಂದರೆ ಕೃಷಿಯ ಉತ್ಪನ್ನ, ಉತ್ಪತ್ತಿ ಮತ್ತು ಆದಾಯ ಈ ಮೂರು ಅಂಶಗಳು ಬೆಲೆಗಳನ್ನೇ ಅವಲಂಬಿಸಿರುತ್ತವೆ. ಆದಾಯ ಮತ್ತು ಕೃಷಿಯ ಮಟ್ಟವನ್ನು ಕಾಯ್ದುಕೊಂಡು ಬರಬೇಕಾದರೆ ಬೆಲೆಗಳಲ್ಲಿ ಸ್ಥಿರತೆ ಇರಬೇಕು ಸಾವಧಾನವಾಗಿ ಬೆಲೆಗಳು ಏರಿದಾಗ ಒಂದು ದೇಶ ಅಭಿವೃದ್ಧಿಹೊಂದುವುದು ಸಾಧ್ಯ. ಬೆಲೆಗಳು ಅನೇಕ ವರ್ಷಗಳಲ್ಲಿ ಸ್ವಲ್ಪಮಟ್ಟಿಗೆ ಏರಿದರೆ ಇದರಿಂದ ಉತ್ತೇಜನಗೊಂಡು ಅವರು ಹೆಚ್ಚು ಬೆಳೆಯುತ್ತಾರೆ. ಉತ್ಪಾದನೆ ಅಧಿಕಗೊಂಡಾಗ ಗ್ರಾಹಕರಿಗೆ ಕಡಿಮೆ ಬೆಲೆಗೆ ವಸ್ತುಗಳು ದೊರೆಯುತ್ತವೆ. ಈ ದೃಷ್ಟಿಯಿಂದ ಸರಕಾರ ಕೃಷಿ ವಸ್ತುಗಳ ಬೆಲೆ ನಿಯಂತ್ರಣಕ್ಕೆ ನಾನಾ ಕ್ರಮಗಳನ್ನು ಜಾರಿಗೆ ತಂದಿದೆ.

ಭಾರತದಲ್ಲಿ 1961 ರವರೆಗೂ ಕೃಷಿವಸ್ತುಗಳ ಬೆಲೆಗಳು ಅಷ್ಟು ತ್ವರಿತಗತಿಯಿಂದ ಏರಿರಲಿಲ್ಲ ಮತ್ತು ಸಾರ್ವಜನಿಕರು ಬೆಲೆಗಳ ಏರಿಕೆಯ ಬಗ್ಗೆ ಹೋರಾಡುತ್ತಿರಲಿಲ್ಲ. ಆದರೆ 1962 ರ ನಂತರ ಬೆಲೆಗಳು ಬಹಳಷ್ಟು ಏರಲು ಪ್ರಾರಂಭವಾಗಿ ಇತ್ತೀಚಿಗೆ ಗಗನಕ್ಕೇರುತ್ತಿವೆ. ಇದನ್ನು ತಡೆಗಟ್ಟಲು ಸರಕಾರ ಗ್ರಾಹಕರ ಸಹಕಾರಿ ಸಂಘಗಳನ್ನು ಸ್ಥಾಪಿಸಿದೆ. ಸಹಕಾರಿ ತತ್ವದ ಮೇಲೆ ರಚಿತವಾಗಿರುವ ಈ ಸಂಘಗಳು ಹಲವಾರು ಕ್ರಮಗಳ ಮೂಲಕ ಬೆಲೆ ಏರಿಕೆಯನ್ನು ತಡೆಗಟ್ಟಲು ಸಮರ್ಥವಾಗಿವೆ. ಈ ಸಂಘಗಳು ವ್ಯವಹಾರದ ಮೇಲೆ ಬಲವಾದ ನಿಯಂತ್ರಣವನ್ನಿಡುವುದಲ್ಲದೆ ವಸ್ತುಗಳ ಬೆಲೆ ಇಳಿಯುವುದಕ್ಕೆ ನೆರವಾಗುತ್ತವೆ ಮತ್ತು ವಸ್ತುಗಳ ಗುಣಮಟ್ಟವನ್ನು ಕಾಯ್ದು ಕೊಂಡು ಬರುತ್ತವೆ.

ಸರ್ಕಾರವು ಅತ್ಯಂತ ಅವಶ್ಯಕ ವಸ್ತುಗಳನ್ನು ಗ್ರಾಹಕರ ಸಂಘಗಳ ಮೂಲಕ ಮಾರಾಟ ಮಾಡುತ್ತದೆ. ಈಗ ಶ್ರೀ ಸಾಮಾನ್ಯರೂ ಈ ವಸ್ತುಗಳನ್ನು ಕೊಳ್ಳಬಹುದು. ಸರಕಾರ ಪಡಿತರ ಪದ್ಧತಿಯನ್ನು ಜಾರಿಗೆ ತಂದಿದ್ದು, ಅಕ್ಕಿ, ಗೋಧಿ, ಸಕ್ಕರೆ, ವನಸ್ಪತಿಗಳನ್ನು ಮಾರಾಟ ಮಾಡುತ್ತಿದೆ. ಈ ಸಂಘಗಳಲ್ಲಿ ಲಾಭ ಪಡೆ

ಯುವ ಆಸೆ, ವಸ್ತುಗಳನ್ನು ಬಚ್ಚಿಟ್ಟು ಕಾಳಸಂತೆಯಲ್ಲಿ ಮಾರುವುದು ಮುಂತಾದ ಯಾವ ರೀತಿಯ ಅಕ್ರಮ ವ್ಯವಹಾರಗಳೂ ನಡೆಯುವುದಿಲ್ಲ. ಈ ಸಂಘಗಳಲ್ಲಿ ಬೆಲೆಯು ಸೂಕ್ತವಾಗಿರುವುದಲ್ಲದೆ, ಮಾರುಕಟ್ಟೆ ಬೆಲೆಗಿಂತಲೂ ಕಡಿಮೆ ಇರುತ್ತದೆ. ಎಲ್ಲಾ ಸರಿ, ಆದರೆ ಸಾರ್ವಜನಿಕ ವಿತರಣ ವ್ಯವಸ್ಥೆಯ ಮೂಲಕ ರಾಜ್ಯದ ಎಲ್ಲಾ ಜನತೆಗೂ ಅವಶ್ಯ ವಸ್ತುಗಳನ್ನು ಹಂಚುವುದು ಅಸಾಧ್ಯ. ಜೊತೆಗೆ ಎಲ್ಲಾ ಅಗತ್ಯ ವಸ್ತುಗಳನ್ನೂ ಈ ವಿತರಣ ವ್ಯವಸ್ಥೆಯಲ್ಲೇ ಪಡೆಯಲು ಆಗದು. ಹೆಚ್ಚೆಂದರೆ ಆಹಾರ ಧಾನ್ಯಗಳು, ಸಕ್ಕರೆ, ಪಾಮೋಲಿನ್ ಎಣ್ಣೆ ಈ ವ್ಯವಸ್ಥೆಯಲ್ಲಿ ದೊರಕಬಲ್ಲವು. ಗ್ರಾಹಕರಿಗೆ ಬೇಕಾದ ಎಲ್ಲಾ ವಸ್ತುಗಳೂ ನ್ಯಾಯಬೆಲೆಯಲ್ಲಿ ಪೇಟೆಯಲ್ಲಿ ಸಿಕ್ಕವು. ಇದು ವಸ್ತು ಸ್ಥಿತಿ. ಬೆಲೆ ಏರಿಕೆಗೆ ತಕ್ಕಂತೆ ಸರಕಾರಿ ನೌಕರರಿಗೆ, ಇತರ ವೇತನ ಪಡೆಯುವ ವರ್ಗಕ್ಕೆ ತುಟ್ಟಿ ಭತ್ಯ ಏರುತ್ತಾ ಹೋಗುತ್ತದೆ. ಆದರೆ ಈ ಹೆಚ್ಚಿನ ವರಮಾನವೆಲ್ಲಾ ಬೆಲೆ ಏರಿಕೆಯ ಮರುಭೂಮಿಯಲ್ಲಿ ಇಂಗಿಹೋಗುತ್ತದೆ. ಸಂಬಳ ಗಾರ ವರ್ಗದ ಇಂದಿನ ಆದಾಯ ಕೇವಲ ಕಾಲ್ಪನಿಕ. ಉತ್ಪಾದಕ ಶ್ರಮಜೀವಿಗಳ ಆದಾಯವಂತೂ ಏತಕ್ಕೂ ಸಾಲದು. ಅವರು ಹೊಟ್ಟೆಬಟ್ಟೆಗೆ ನೇರಮಾಡಿಕೊಳ್ಳು ವುದೇ ಕಷ್ಟ ಅಂತಲೇ ಕಡುಬಡತನದ ರೇಖೆಯ ಕೆಳಗೆ ಇರುವವರ ಸಂಖ್ಯೆ ದಿನದಿನಕ್ಕೂ ಹೆಚ್ಚುತ್ತಲೇ ಇರುತ್ತದೆ. ಯಾವುದೇ ವಸ್ತುವಾಗಲಿ ನ್ಯಾಯೋಚಿತ ಬೆಲೆಯಲ್ಲಿ ಗ್ರಾಹಕ ನಿಗೆ ದೊರಕಬೇಕಾದರೆ ಮಧ್ಯವರ್ತಿಗಳ ದರೋಡೆ ನಿಲ್ಲಬೇಕು. ಒಟ್ಟುಗಟ್ಟಲೆ ವ್ಯಾಪಾರಿ ಗಳು ಬೆಳೆಯುವವರನ್ನೂ ಸುಲಿಯುತ್ತಾರೆ, ಗ್ರಾಹಕರನ್ನೂ ಶೋಷಿಸುತ್ತಾರೆ. ಈ ವ್ಯವಸ್ಥೆಯನ್ನು ಮಾರ್ಪಡಿಸದೆ ಬೆಲೆಗಳು ಹತೋಟಿಗೆ ಬರುವುದು ಅಸಂಭವ. ಇದರ ಜೊತೆಗೆ ಸರಕಾರ ತಾನು ಮಾಡುವ ವೆಚ್ಚದಲ್ಲಿ ಮಿತವ್ಯಯವನ್ನು ಸಾಧಿಸಬೇಕು. ಬೆಲೆಗಳು ಏರಲು ಕಾರಣವಾದ ಹಣವನ್ನು ಜನರಲ್ಲಿ ಸೇರದಂತೆ ತಡೆದು ಆವಶ್ಯಕ ವಸ್ತುಗಳ ಬೆಲೆಗಳನ್ನು ನಿಯಂತ್ರಿಸಬೇಕು. ಕೃಷಿಕ್ಷೇತ್ರಕ್ಕೆ ಹೆಚ್ಚಿನ ಆದ್ಯತೆ ನೀಡಿ, ಉತ್ಪಾದನಾ ಹೆಚ್ಚಳಕ್ಕೆ ಪ್ರೋತ್ಸಾಹ ನೀಡಬೇಕು. ಇತರ ದೇಶಗಳಿಂದ ಅಭಾವ ಇರುವ ವಸ್ತುಗಳನ್ನು ಆಮದುಮಾಡಿಕೊಳ್ಳಬೇಕು. ಏಕೆಂದರೆ ಅಲ್ಪಾವಧಿಯಲ್ಲಿ ಉತ್ಪಾದನೆ ಹೆಚ್ಚಿಸುವುದು ಸಾಧ್ಯವಿಲ್ಲ. ಆಮದನ್ನು ಹೆಚ್ಚಿಸುವುದರ ಜೊತೆಗೆ ಕೃಷಿ ವಸ್ತುಗಳ ರಫ್ತನ್ನು ಕಡಿಮೆಮಾಡಬೇಕು. ಆಗ ನಮ್ಮ ದೇಶದಲ್ಲೇ ವಸ್ತುಗಳ ಪೂರೈಕೆ ಹೆಚ್ಚಾಗಿ ಬೆಲೆಗಳು ಇಳಿಯುತ್ತವೆ. ಅವಶ್ಯ ವಸ್ತುಗಳ ಬೆಲೆಗಳನ್ನು ನಿರ್ಧರಿಸಿ ತಾನು ನಿಗದಿಪಡಿಸಿದ ದರದಲ್ಲೇ ವಸ್ತುಗಳನ್ನು ಮಾರಾಟಮಾಡಬೇಕೆಂದು ಸರಕಾರ ಆಜ್ಞೆ ವಿಧಿಸಬೇಕು. ಸರಕಾರ ನಿರ್ಧರಿಸಿದ ಬೆಲೆಗಳಿಗಿಂತ ಹೆಚ್ಚು ಬೆಲೆಗೆ ಕೃಷಿ ವಸ್ತುಗಳನ್ನು ಮಾರಾಟಮಾಡುವ ಸಮಾಜದ್ರೋಹಿ ವರ್ತಕರನ್ನು ಶಿಕ್ಷೆಗೆ ಗುರಿಪಡಿಸಬೇಕು. ಈ ವಸ್ತುಗಳು ಎಲ್ಲರಿಗೂ ಸರಿಯಾಗಿ ಹಂಚಿಕೆಯಾಗುವಂತೆ ಮೇಲ್ವಿಚಾರಿಕೆ ವಹಿಸಬೇಕು. ಜೊತೆಗೆ ಕೂಲಿಯ ದರಗಳು, ಸಂಬಳ, ತುಟ್ಟಿ-ಭತ್ಯೆಗಳನ್ನು ಸರಕಾರ ನಿಯಂತ್ರಣ

ದಲ್ಲಿಡಬೇಕು. ಮಾರಾಟಮಾಡುವ ವರ್ತಕರು ಸರಕಾರದಿಂದ ಲೈಸೆನ್ಸ್ ಪಡೆದಿರಬೇಕು. ಈ ಕ್ರಮಗಳು ಯಶಸ್ವಿಯಾಗಬೇಕಾದರೆ ಅಧಿಕಾರಿಗಳು ದಕ್ಷರೂ, ಪ್ರಾಮಾಣಿಕರೂ ಆಗಿರಬೇಕು. ಇಲ್ಲದಿದ್ದರೆ ಅಕ್ರಮ ವ್ಯಾಪಾರಕ್ಕೆ ಎಡೆಮಾಡಿಕೊಟ್ಟು ಭ್ರಷ್ಟಾಚಾರ ಹೆಚ್ಚಾಗುತ್ತದೆ.

1983 ರಲ್ಲಿ ಅತ್ಯಾವಶ್ಯಕ ಪದಾರ್ಥಗಳ ಅದರಲ್ಲೂ ವಿಶೇಷವಾಗಿ ಆಹಾರ ಪದಾರ್ಥಗಳ ಬೆಲೆಗಳಲ್ಲಿ ಗಣನೀಯ ಪ್ರಮಾಣದಲ್ಲಿ ಹೆಚ್ಚಳ ಉಂಟಾಗಿದೆ. 1982-83 ರಲ್ಲಿ ಆಹಾರ ಪದಾರ್ಥಗಳ ಉತ್ಪಾದನೆಯಲ್ಲಿ ಇಳಿಮುಖವಾಗಿರುವುದೇ ಇದಕ್ಕೆ ಕಾರಣ. ಕಳೆದ ವರ್ಷ ಹೆಚ್ಚುಕಡಿಮೆ ಸ್ಥಿರವಾಗಿದ್ದವೆಂದು ಹೇಳಬಹುದಾದ ಪರಿಸ್ಥಿತಿಯಲ್ಲಿದ್ದ ಉತ್ಪಾದಿತ ವಸ್ತುಗಳ ಬೆಲೆಗಳು 1983 ರಲ್ಲಿ ಗಣನೀಯವಾಗಿ ಏರಿವೆ ಎಂಬುದೂ ಇದಕ್ಕೆ ಒಂದು ಪೂರ್ವ ನಿದರ್ಶನ. ಈ ದಿಶೆಯಲ್ಲಿ ಕೇಂದ್ರ ಸರಕಾರವು ಗೊತ್ತುಪಡಿಸಿರುವ ಬೆಲೆಗಳಿಗೆ ಸಂಬಂಧಪಟ್ಟ ತನ್ನ ಕಾರ್ಯನೀತಿಯನ್ನು ಹೊಸದಾಗಿ ಪರಿಶೀಲಿಸುವುದು ಹಾಗೂ ಪರಿವರ್ತನೆ ಮಾಡುವುದು ಅನಿವಾರ್ಯ. ಕೇಂದ್ರಸರಕಾರ ಹಣಕಾಸಿನ ಅಧಿಕ ಚಲಾವಣೆಯ ಮೇಲೆ ಹೆಚ್ಚಿನ ಪ್ರತಿಬಂಧವನ್ನು ಹೇರಿ ಕೆಲವು ಪ್ರಮುಖ ವಲಯಗಳಲ್ಲಿನ ಅಧಿಕ ಬೇಡಿಕೆಗಳನ್ನು ಕನಿಷ್ಠಗೊಳಿಸಿ ರಾಜ್ಯ ಸರಕಾರಗಳು ಗೊತ್ತುಪಡಿಸಿದ ಬೆಲೆಗಳೊಂದಿಗೆ ಸಮನ್ವಯವಾಗುವಂತಹ ಬೆಲೆ ನೀತಿಯನ್ನು ಜಾರಿಗೆ ತರುವ ಮೂಲಕ ಸರಕಾರಿ ಉದ್ಯಮಗಳಿಂದ ಪ್ರಚೋದಿತವಾದ ಬೆಲೆ ಏರಿಕೆಯ ಪರಿಣಾಮಗಳನ್ನು ತಡೆಯುವುದು ವಿಹಿತ. ಹೆಚ್ಚು ನೆಲವನ್ನು ಕೃಷಿಗೆ ಒಳಪಡಿಸುವುದರಿಂದಲೂ ಬೆಲೆ ಏರಿಕೆಯ ಪರಿಸ್ಥಿತಿಯನ್ನು ಸುಧಾರಿಸಬಹುದು. ಈ ದಿಸೆಯಲ್ಲಿ ನೀರಾವರಿ, ಆಹಾರ ವಿತರಣೆಯ ವ್ಯವಸ್ಥೆಯಲ್ಲಿ ಮಾರ್ಪಾಟು, ಹೊಸ ಬಗೆಯ ಬೆಳೆಗಳ ಅಭಿವೃದ್ಧಿ, ಸಂಶೋಧನೆ ಮುಂತಾದ ದಿಕ್ಕುಗಳಲ್ಲಿ ಪ್ರಯತ್ನ ಅಗತ್ಯ. ಬೆಲೆ ಏರಿಕೆ ಮುಖ್ಯ ಆರ್ಥಿಕ ಸಮಸ್ಯೆ. ಇದರ ಪರಿಹಾರವಾಗಬೇಕಾದರೆ ಯೋಜನೆಗಳಲ್ಲಿ ಉತ್ಪಾದನವೃದ್ಧಿಗೆ ಆದ್ಯಗಮನ ಇರಬೇಕು. ಹಾಗಾದಲ್ಲಿ ಮತ್ತು ಅದು ಯಶಸ್ವಿಯಾದಲ್ಲಿ ಮಾತ್ರ ಗ್ರಾಹಕರ ಅವಶ್ಯಕತೆ ಈಡೇರಿ ಬೆಲೆ ಇಳಿದೀತು. ಆದ್ದರಿಂದ ಪ್ರಪ್ರಥಮವಾಗಿ ನಾವೀಗ ಸಾಧಿಸಬೇಕಾಗಿರುವುದು ಅಧಿಕ ಉತ್ಪಾದನೆ. ಅದೇ ಪ್ರಧಾನ, ಮಿಕ್ಕೆಲ್ಲವೂ ಗೌಣ, ಶತಾಯ ಗತಾಯ ಉತ್ಪಾದನೆಯನ್ನು ಸಾಧಿಸಿದಲ್ಲಿ ಬೆಳಕು ಕಂಡೊಡನೆ ಕತ್ತಲೆ ತಾನಾಗಿ ಅಡಗುವಂತೆ ಬೆಲೆ ಏರಿಕೆ ತಾನಾಗಿ ಮರೆಯಾಗುತ್ತದೆ. ಇಲ್ಲಿ ಮತ್ತೊಂದು ಅಂಶವನ್ನು ಮುಖ್ಯವಾಗಿ ಗಮನದಲ್ಲಿಡಬೇಕಾಗಿದೆ. ಅದೆಂದರೆ, ಮಧ್ಯವರ್ತಿಗಳ ಭದ್ರಮುಷ್ಟಿಯಿಂದ, ಕಾಳಸಂತೆಕೋರರ ಕಪಿಹಿಡಿತದಿಂದ, ಭ್ರಷ್ಟಾಚಾರದ ಬಲೆಯಿಂದ ಆವಶ್ಯಕ ಕೃಷಿವಸ್ತುಗಳ ಪ್ರವಹನವನ್ನು ಮುಕ್ತಗೊಳಿಸದ ಹೊರತು ರಾಷ್ಟ್ರ ಮಟ್ಟದಲ್ಲಿ ಕೃಷಿವಸ್ತುಗಳ ಬೆಲೆಏರಿಕೆ ಹದಕ್ಕೆ ಬರಲಾರದು ಹಾಗೂ ಜನಹಿತವನ್ನು ಸಾಧಿಸಲಾರದು.

# ಶಿವಲಿಂಗ ಪೂಜೆಯಲ್ಲಿ ವೈಜ್ಞಾನಿಕ ಅರಿವು

—ಶ್ರೀ ಡಾ. ಚಂದ್ರಶೇಖರಸ್ವಾಮಿ ಕೆ. ಹುಲ್ಮಠ.

ಪ್ರತಿವರ್ಷ "ಶಿವರಾತ್ರಿ" ಮತ್ತು ಮಹಾನವಮಿ ಅಮಾವಾಸ್ಯೆಗೆ ಐದು ದಿನಗಳಿಗಿಂತ ಮೊದಲು ನಾನು ಲಿಂಗಪೂಜೆಗೆ ಕೂಡ್ರುತ್ತೇನೆ. ಐದು ದಿನಗಳವರೆಗೆ ಕಣ್ಣು ಮುಚ್ಚದಂತೆ ಕೂಡುವುದು ಎಂದರೆ ಇಲ್ಲಿ ಬಹು ಜನರಿಗೆ ಕುತೂಹಲವೆನಿಸಿದೆ. ಇಲ್ಲಿಗೆ ಬರು ಹೋಗುವ ಜನರಿಗೆ ಇದರ ರಹಸ್ಯದ ವಿಷಯಗಳನ್ನು ತಿಳಿಸುತ್ತಿರುತ್ತೇನೆ. ಇದರಿಂದ ಒಬ್ಬರಿಂದಒಬ್ಬರು ಹೆಚ್ಚಿಗೆ ಜನರು ಬರತೊಡಗಿದ್ದಾರೆ. ಈ ವಿಷಯವಾಗಿ ತಮಗೂ ಬರೆದು ತಿಳಿಸಬೇಕೆಂದು ಕಳೆದ ತಿಂಗಳಲ್ಲಿಯೇ ಇಚ್ಛಿಸಿದ್ದೆ. ಪತ್ರ ಬಹಳ ಉದ್ದವಾದೀತೆಂಬ ಭಯಉಂಟಾಗಿತ್ತು. ಆದರೆ ಈಗ ಧೈರ್ಯಮಾಡಿದ್ದೇನೆ. "ಶಿವಲಿಂಗ ತತ್ತ್ವಗಳಲ್ಲಿ ವಿಜ್ಞಾನ ರಹಸ್ಯ" ನಾನು ಬರೆದಿರುವ ಈ ಗ್ರಂಥಗಳಲ್ಲಿ ವರ್ಣಿಸಿದ್ದನ್ನೇ ಅತೀ ಸಂಕ್ಷಿಪ್ತವಾಗಿ ಇಲ್ಲಿ ಬರೆದಿದ್ದೇನೆ.

ಚಿಕ್ಕಂದಿನಿಂದಲೂ ಲಿಂಗಪೂಜೆ ಮಾಡಿಕೊಳ್ಳುತ್ತಲೇ ಬಂದಿದ್ದೆ. ಆದರೆ ಆ ಪೂಜೆಗಳೆಲ್ಲಾ ಜ್ಞಾನವಿಲ್ಲದೇ ಮಾಡಿದವುಗಳಾಗಿದ್ದವು. ಕಲಕತ್ತೆ (ಬ್ಯಾರಖಪೂರ) ಮಿಲಿಟರಿ ಹಾಸ್ಪಿಟಲ್‌ನಿಂದ ಸಂಶೋಧನೆಗಳನ್ನು ಪ್ರಾರಂಭಿಸಿದ ನಂತರ "ರಂಗೂನ್, ಮೆಕ್ಟಿಲಾ, ಮೇಮಿಯೋ ಮಂಡಾಲೆಗಳಲ್ಲಿದ್ದಾಗಲೂ ಸಹಿತ ಸಂಶೋಧನೆಗಳನ್ನು ಮುಂದುವರಿಸಿದ್ದೆ. ಆಧುನಿಕ ಸಾಯನ್ಸನಿಂದ ಬಹಳ ಪ್ರಯೋಜನ ಉಂಟಾಯಿತು. ಗ್ರೀಸ್‌ದೇಶದ "ಕರೋಬಾಮಣಿ" ಮತ್ತು "ಭಾರತದ ಸಾಲಿಗ್ರಾಮ"ಗಳಲ್ಲಿ ಇಲೆಕ್ಟ್ರಿಕ್ ಅಂಶ ಇರುತ್ತದೆಂದು ಆಗಿನ ಜನರಿಗೆ ಗೊತ್ತಿತ್ತು. ಇದು ಕ್ರಿ.ಶ.ಕ್ಕಿಂತಲೂ ಪೂರ್ವದ್ದು. ಮನುಷ್ಯನಿಗೆ ಇವು ಹಗಲೆಲ್ಲಾ ಸಿಗುವಂತಹ ವಸ್ತುಗಳಲ್ಲಾ. ಅವರಿಗಿಂತ ನಮ್ಮ ನಾಡಿನ ಪೂರ್ವಜರು ಆಧ್ಯಾತ್ಮಿಕ ವಿಜ್ಞಾನ (Spiritual Science) ದಲ್ಲಿ ಅತೀ ಮುಂದುವರಿದಿದ್ದರೆಂದು ತಿಳಿದುಬರುತ್ತದೆ. ಯಾಕೆಂದರೆ ಸಣ್ಣ ಸಣ್ಣ ಪೀಠಿಕಾಲಿಂಗಗಳಲ್ಲಿ ೧) ಎಣ್ಣೆಯ ಕಂತೆ ೨) ತುಪ್ಪದ ಕಂತೆ ೩) ಕರ್ಪೂರ ಕಂತೆ ೪) ವಜ್ರ ಕಂತೆಗಳೆಂದು ನಾಲ್ಕು ಭೇದಗಳಿವೆ. ನಂ. ೧. ಇದು ಬಡವರಿಗೆ ಮಾತ್ರ ತಡವಾಗಿಯಾದರೂ ಪ್ರಯೋಜನ ಉಂಟು ಉಳಿದ ಮೂರು ಕಂತೆಯ ಲಿಂಗಗಳು ಶಿವಯೋಗ ಸಾಧಕರಿಗೆ ಬಹಳ ಪ್ರಯೋಜನ ಉಳ್ಳವುಗಳಾಗಿವೆ. ಇವುಗಳಲ್ಲಿ ಕರ್ಪೂರ ಕಂತೆ ಬಹಳ ಹಗುರವಾಗಿಯೂ ಹೊಳಪುಳ್ಳದ್ದಾಗಿ ಇರುತ್ತದೆ.

ಶಿವಲಿಂಗಪೂಜೆ ಸಾಧಕರು ಈ ಕೆಳಗಿನ ಮುಖ್ಯಾಂಶಗಳನ್ನು ತಿಳಿದವರಾಗಿರಬೇಕು.

೧) ಕರಿಯ ಬಣ್ಣಕ್ಕೆ ಉಳಿದ ಎಲ್ಲ ಬಣ್ಣಗಳನ್ನು ಅಡಗಿಸಿಕೊಳ್ಳುವ ಗುಣ ಉಂಟು.

೨) ಮನುಷ್ಯ ಶರೀರದಲ್ಲಿ ೩೭% ಪ್ರಮಾಣದಷ್ಟು ವಿದ್ಯುತ್ ಅಂಶ ಇದೆ.

೩) ಪ್ರಕಾಶ ಕಿರಣಗಳಲ್ಲಿ ಸಹಿತ ಸೂಕ್ಷ್ಮರೀತಿಯಿಂದ ವಿದ್ಯುತ್ ಅಂಶ ಇರುತ್ತದೆಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ.

೪) ರೇಶ್ಮೆಯ ವಸ್ತ್ರ, ಉಣ್ಣೆ, ಬೆಕ್ಕಿನ ಕಪ್ಪಳ, ವ್ಹೆಲ್ಕನೆಟ್‌ಗಳಲ್ಲಿ ವಿದ್ಯುತ್ ಅಂಶ ಇರುತ್ತದೆಂದು "ಸಾಯನ್ಸ್ ಮುಖಾಂತರ ನಮಗೆ ತಿಳಿದ ವಿಷಯವೇ ಆಗಿದೆ. ರೇಶ್ಮೆಯವಸ್ತ್ರದಲ್ಲಿ ಲಿಂಗವನ್ನು ತಿಕ್ಕಿತೀಡುವುದರಿಂದ ಶಿವಲಿಂಗದ ಸುತ್ತಲೂ ವಿದ್ಯುತ್ (ಕಾಂತತ್ವ) ಅಂಶವು ಸೂಕ್ಷ್ಮರೀತಿಯಿಂದ ಉಂಟಾಗುತ್ತದೆ.

೫) ಲಿಂಗಕ್ಕೆ ೧. ಹಾಲು ೨. ಮೊಸರು ೩. ಸಕ್ಕರೆ ೪. ಜೇನುತುಪ್ಪ ೫. ಗೋಮೂತ್ರ ಈ ಐದನ್ನು ಕೂಡಿಸಿ "ಪಂಚಾಮೃತದ" ಅಭಿಷೇಕಮಾಡುತ್ತಾರೆ. ಅಭಿಷೇಕ ಮುಗಿದ ನಂತರ ಅದನ್ನು ಚಲ್ಲಬಾರದು ಪೂಜೆಯ ನಂತರ ಅದನ್ನು ನಾವೇ ಕುಡಿಯಬೇಕು.

೧) ಹಾಲು–ರಕ್ತದ ಅಂಶವನ್ನು ಹೆಚ್ಚಿಸುವ ಗುಣವಿದೆ.

೨) ಮೊಸರು–ರಕ್ತದ ಒತ್ತಡವನ್ನು ಸಮತೂಕದಲ್ಲಿಡುತ್ತದೆ. ಹೃದಯದ ರೋಗ (ಕಾಲೋನರಿಥ್ರೈಂಬಾಸಿಸ್)ವನ್ನು ದೂರಮಾಡುತ್ತದೆ. ಕಣ್ಣಿಗೆ ಕಾಂತಿ ಚುನ್ನುಂಟುಮಾಡುತ್ತದೆ. (ಅಂದರೆ ಹೆಚ್ಚಿಗೆ ತಿಂದರೆ ಕೆಲವು ಹೊತ್ತಿನವರೆಗೆ ಕಣ್ಣು ಮಂದವಾಗುವುದೂ ಉಂಟು.)

೩) ಸಕ್ಕರೆ–ರಕ್ತಕ್ಕೆ ಸಕ್ಕರೆಯ ಅಂಶವನ್ನು ಪೂರೈಸುತ್ತದೆ.

೪) ಜೇನುತುಪ್ಪ–ರಕ್ತ ಶುದ್ಧಿಮಾಡುವುದಲ್ಲದೆ, ಉಷ್ಣತೆಯನ್ನು ಹೆಚ್ಚಿಸಿ ಜ್ಞಾನತಂತುವಿನ ನರಗಳಲ್ಲಿ ವಿದ್ಯುತ್ ಅಂಶವನ್ನು ಹೆಚ್ಚಿಸುತ್ತದೆ. ನರಗಳಲ್ಲೆಲ್ಲಾ ಚೈತನ್ಯ ತುಂಬಿಬರುತ್ತದೆ. (ಹೆಚ್ಚಾಗಿ ತಿಂದರೆ ನಿದ್ರೆ ಚನ್ನಾಗಿ ಬರುತ್ತದೆ. ಹೊಟ್ಟೆ ನೋವು ಸಹಿತ ಗುಣವಾಗುತ್ತದೆ.)

೫) ಗೋಮೂತ್ರ–ಗೋಮೂತ್ರದಲ್ಲಿಯ "ಯುರಿಕ್ ಆ್ಯಸಿಡ್"ನ ಪ್ರಭಾವದಿಂದ ಶರೀರದಲ್ಲಿಯ ವಿದ್ಯುತ್ ಅಂಶವು ಹೆಚ್ಚಾಗಿ ವಿದ್ಯುತ್ ವಾಹಕ ಕಾರ್ಯನಡೆಯುತ್ತದೆ. ಈಗಿನ ಕಾಲದಲ್ಲಿ ಎತ್ತು, ಆಕಳುಗಳ ಸಗಣಿ ಗೋಮೂತ್ರ ಸಂಗ್ರಹಮಾಡಿ ವಿದ್ಯುತ್ ಹುಟ್ಟಿಸಿ ಅನೇಕ ಪ್ರಯೋಜನ ಪಡೆಯುತ್ತಿದ್ದಾರೆ. ಇದು

ಎಲ್ಲರಿಗೂ ಗೊತ್ತಿರಲಿಕ್ಕೆ ಸಾಕು. ದೀಕ್ಷೆಹೊಂದುವಾಗ ವಟುವಿಗೆ ಆಕಳ ಸಗಣಿಯನ್ನು ಗೋಮೂತ್ರದಲ್ಲಿ ಕೂಡಿಸಿ ಕುಡಿಸುವ ನಿಯಮಉಂಟು. ಕಫ, ಕೆಮ್ಮು ಮೊದಲಾದ ರೋಗಗಳು ಗುಣವಾಗುತ್ತವೆ.

ಲಿಂಗಕ್ಕೆ ಪಂಚಾಮೃತದ ಅಭಿಷೇಕ ಮಾಡಿದನಂತರ ನಾವೇ ಕುಡಿಯಬೇಕು ಇಲ್ಲವೆ ಪೂಜೆ ಮುಗಿದನಂತರ ಕುಡಿಯಬೇಕು. ಅನಂತರ ಲಿಂಗವನ್ನು ತಣ್ಣೀರು, ಬಿಸಿನೀರುಗಳಿಂದ ತೊಳೆದು ರೇಷ್ಮೆಯ ವಸ್ತ್ರದಲ್ಲಿ ಲಿಂಗವನ್ನು ಚೆನ್ನಾಗಿ ಹೊಳೆಯುವಂತೆ ತಿಕ್ಕಿ ಒರೆಸಬೇಕು. ಆಗ ಲಿಂಗದ ಸುತ್ತಲೂ ವಿದ್ಯುತ್ (ಕಾಂತತ್ವ) ಉಂಟಾಗುತ್ತವೆ. ಆಗ ಸಣ್ಣಸಣ್ಣ ಕಾಗದದ ಚೂರುಗಳನ್ನಾಗಲೀ ಜಿನುಗಾದ ಕಟ್ಟಿಗೆಯ ಪುಡಿಯನ್ನಾಗಲೀ ಲಿಂಗದ ಸಮೀಪದಲ್ಲಿಟ್ಟರೆ ಚಟ್ಟನೆ ಹಾರಿ ಲಿಂಗಕ್ಕೆ ಅಂಟಿಕೊಳ್ಳುತ್ತವೆ. ಇದನ್ನು ಗುರ್ತಿಸಿಕೊಂಡು ಎಡ ಅಂಗೈಮೇಲೆ ಲಿಂಗವನ್ನಿಟ್ಟುಕೊಳ್ಳಬೇಕು. ನಮ್ಮ ಎಡಭಾಗದಲ್ಲಿ "ಶಮೆ"ಯಲ್ಲಿ ದೀಪ ಇರಬೇಕು. ಆಕಳ ತುಪ್ಪದ ದೀವಿಗೆ ಇದ್ದರಂತೂ ಬಹಳ ಒಳ್ಳೆಯದು. ಎಣ್ಣೆಯ ದೀಪದಿಂದ ಹೊರಡುವ ಪ್ರಕಾಶ ಕಿರಣಗಳಲ್ಲಿಯ ವಿದ್ಯುತ್ ಅಂಶಕ್ಕಿಂತಲೂ ಆಕಳ ತುಪ್ಪದ ದೀವಿಗೆಯಿಂದ ಹೊರಡುವ ಪ್ರಕಾಶ ಕಿರಣಗಳಲ್ಲಿ ವಿದ್ಯುತ್ ಅಂಶ ಹೆಚ್ಚಿಗೆ ಶಕ್ತಿಉಳ್ಳದ್ದಾಗಿರುತ್ತದೆ. ಜ್ಯೋತಿಯ ಪ್ರಕಾಶ ಕಿರಣಗಳು ಲಿಂಗದ ನಡುಮಧ್ಯದಲ್ಲಿ ಬಿದ್ದು ವಕ್ರೀಭವನ ಹೊಂದುತ್ತವೆ. ಆಗ ಪ್ರಕಾಶ ಕಿರಣಗಳಲ್ಲಿರುವ ವಕ್ರೀಭವನ (Reflex) ಹೊಂದುತ್ತವೆ. ಲಿಂಗದಲ್ಲಿ ಉತ್ಪನ್ನವಾಗಿರುವ ವಿದ್ಯುತ್ ಅಂಶವು ಲಿಂಗದ ಸುತ್ತಲೂ ಇದ್ದಲ್ಲಿಯೇ ಇರುತ್ತದೆ. ಮುಂದೆ ಬಂದಿರುವುದಿಲ್ಲಾ, ಆದರೆ ಜ್ಯೋತಿಯ ಪ್ರಕಾಶ ಕಿರಣಗಳು ಲಿಂಗದ ಮೇಲೆ ಬಿದ್ದಾಗ ಕಿರಣಗಳು ವಕ್ರೀಭವನ ಹೊಂದುವಾಗ ಲಿಂಗದಲ್ಲಿಯ ವಿದ್ಯುತ್ ಅಂಶ ಸಮೇತವಾಗಿ ವಕ್ರೀಭವನ ಹೊಂದುತ್ತದೆ. ಹೀಗೆ ವಕ್ರೀಭವನ ಹೊಂದಿಬರುವ ವಿದ್ಯುತ್ ಅಂಶ ಸಮೇತ ಕಿರಣಗಳನ್ನು ನಮ್ಮ ಕಣ್ಣುಗೊಂಬೆಯಲ್ಲಿರುವ ವಿದ್ಯುತ್ ಅಂಶವು ತನ್ನಕಡೆಗೆ ಆಕರ್ಷಿಸಿಕೊಳ್ಳುತ್ತದೆ. ಕೆಲವರು ಕಣ್ಣುಮುಚ್ಚಿ ಲಿಂಗಪೂಜೆ ಮಾಡಿಕೊಳ್ಳುತ್ತಾರೆ ಇದು ತಪ್ಪು (ತಪ್ಪು ಅಂತ ಅನ್ನಲಿಕ್ಕೂ ಸಹಿತ ಬರುವಂತಿಲ್ಲಾ) ಯಾಕೆಂದರೆ ಅಂತರ್‌ದೃಷ್ಟಿಧ್ಯಾನ ಉಳ್ಳವರಾಗಿದ್ದರೆ? ಈ ಮಾನವನ ಹಣೆಯ ಮಧ್ಯದಲ್ಲಿ ಆಪರೇಶನ್ ಮಾಡಿದಾಗ ಕೆಲವೊಂದು ಸಾರೆ ಈ ಸೂಕ್ಷ್ಮವಾದ ಕಣ್ಣು ನಮ್ಮ ಬರಿಯ ಕಣ್ಣುಗಳಿಗೂ ಸಹಿತ ಕಾಣಿಸಲಾರದು. ಅಷ್ಟು ಸೂಕ್ಷ್ಮವಾಗಿರುತ್ತದೆ. "ಪಾವರ್‌ಫುಲ್ ಮೈಕ್ರೋಸ್ಕೋಪ್" ಯಂತ್ರದ ಸಹಾಯದಿಂದ ಈಗಿನ ವಿಜ್ಞಾನಿಗಳು ಇದು ಇರುವುದು ನಿಜವೆಂದು ಸ್ಪಷ್ಟಪಡಿಸಿದ್ದಾರೆ. ಇದಕ್ಕೆ ನಮ್ಮ ಪೂರ್ವಜರು "ಜ್ಞಾನನೇತ್ರ" ಎಂದು ಕರೆದಿದ್ದಾರೆ. ಇದರಿಂದ ಶಿವನಿಗೆ "ತ್ರಿನೇತ್ರಧಾರಿ" ಎಂದು ನಮ್ಮ ಪುರಾಣ, ಕೀರ್ತನಗಳಲ್ಲಿ ಹೇಳುವ ಕಥೆಗಳೂ ಸಹಿತ ಇದನ್ನೇ ಪ್ರತಿಪಾದಿಸುತ್ತವೆ. ಇದು ಸತ್ಯವೂ ಆಗಿದೆ, ಎರಡೂ ಕಣ್ಣಿಲ್ಲದ ಕುರುಡರಲ್ಲಿ ಈ ಜ್ಞಾನನೇತ್ರವು

ಸದಾ ಜಾಗ್ರತಾವಸ್ಥೆಯಲ್ಲಿರುತ್ತದೆ ಶರೀರದಲ್ಲಿರುವ ವಿದ್ಯುತ್ ಅಂಶವು ಜ್ಞಾನವಾಹಕ ನರಗಳ ಮುಖಾಂತರ ನಮ್ಮ ಎರಡೂ ಕಣ್ಣುಗೊಂಬೆಗಳಿಗೆ ಬಂದು ಮುಟ್ಟಿರುತ್ತದೆ ಯಷ್ಟೇ. ಕುರುಡರಲ್ಲಿ ಇವು ಹೊರಳಿ ಪೀನಿಯಲ್ ಕಣ್ಣಿನ ಜೊತೆಗೆ ಕೇಂದ್ರಿಕೃತ ವಾಗಿರುತ್ತದೆ. ಇವರು ಅಂಗೈಮೇಲೆ ಲಿಂಗಧರಿಸಿಕೊಂಡು ಪೂಜೆ ಮಾಡುತ್ತಿರುವಾಗ, ಲಿಂಗದಲ್ಲಿ ಉಂಟಾಗಿರುವ ವಿದ್ಯುತ್ ಅಂಶವು ಪ್ರಕಾಶ ಕಿರಣಗಳಿಂದ ಕೂಡಿಕೊಂಡಾಗ ಅಂಗೈಯಲ್ಲಿರುವ ಜ್ಞಾನತಂತು ನರಗಳ ಮುಖಾಂತರ ಬೆನ್ನೆಲುಬಿನ ಮಧ್ಯದಲ್ಲಿ ಸಣ್ಣ ಮೆದುಳಿನ ಮುಖಾಂತರ ಕುಂಡಿಯ ತುದಿಯವರೆಗೆ ಬಂದಿರುವ ದೊಡ್ಡ ಜ್ಞಾನತಂತು (ಮೆದುಳುಬಳ್ಳಿ)ವಿಗೆ ೭ನೇಯ ನಂಬರಿನ "ಸರ್ವೆಯಿಕಲ್ ಬೋನ್" ಎಂಬುವ ಮಣಿ ಎಲುಬಿನಹತ್ತಿರ ಸಂಧಿಸುತ್ತದೆ. ಅಲ್ಲಿಂದ ಸಣ್ಣಮೆದುಳು ಮುಖಾಂತರ ದೊಡ್ಡ ಮೆದುಳು, ಪಿಟ್ಯೂಟರಿಗ್ಲ್ಯಾಂಡ್ (ಸರ್ವಗ್ರಂಥಿ ನಿಯಂತ್ರಕ) ಮುಖಾಂತರ ಈ ಪೀನಿ ಯಲ್ ಕಣ್ಣಿಗೆ ಬಂದು ಮುಟ್ಟುತ್ತದೆ. ಕುರುಡರಲ್ಲಿ ಮೊದಲೇ ಸದಾ ಜಾಗ್ರತಾವಸ್ಥೆ ಯಲ್ಲಿರುವ ಈ ಪೀನಿಯಲ್ ಕಣ್ಣು ಮತ್ತಷ್ಟು ಚೈತನ್ಯವುಳ್ಳದ್ದಾಗುತ್ತದೆ. (ಇದೇ ಕಾರಣದಿಂದಕಣ್ಣಿದ್ದವರಿಗಿಂತಲೂ ಹೆಚ್ಚಾಗಿ ಕುರುಡರು, ಅಂತರದೃಷ್ಟಿ ಜ್ಞಾನವುಳ್ಳವ ರಾಗಿರುತ್ತಾರೆ) ಇವರಿಗೆ ಯಾವುದಾದರೂ ಒಂದು ವಿದ್ಯೆಯ ವಿಷಯವಾಗಿ ಟ್ರೇನಿಂಗ್ ಕೊಟ್ಟರೆ ಬಹುಬೇಗ ಪಾರಂಗತರಾಗುತ್ತಾರೆ. ಇಂಥವರಿಂದ ಸಮಾಜಸೇವೆ ಭಕ್ತಿ ಯಿಂದ ಉತ್ತಮ ರೀತಿಯಲ್ಲಿ ಉಜ್ವಲಗೊಂಡು, ಸಮಾಜಕ್ಕೂ, ನಾಡಿಗೂ, ದೇಶಕ್ಕೂ ಅಷ್ಟೇ ಅಲ್ಲದೆ ಸರ್ವ ಜಗತ್ತಿಗೂ ಒಳ್ಳೆಯ ಮಾರ್ಗದರ್ಶಕರಾಗುತ್ತಾರೆ. ನಾನು ಚಿಕ್ಕವನಿದ್ದಾಗ ಹಾವೇರಿಯಲ್ಲಿ ಹುಕ್ಕೇರಿಮಠಕ್ಕೆ ಬಹಳ ಹೋಗುತ್ತಿದ್ದೆ. ಅಲ್ಲಿ ಶ್ರೀ ಶಿವಬಸವ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಹುಟ್ಟು ಕುರುಡರಾದ, ಪಂ. ಪಂಚಾಕ್ಷರ ಗವಾಯಿಗಳವರ ಮತ್ತು ಅವರ ಶಿಷ್ಯರಾದ ಪಂ. ಪುಟ್ಟರಾಜ ಗವಾಯಿಗಳವರ (ಇವರು ಕುರುಡರೇ) ಕೀರ್ತನ ನಡೆಯುತ್ತಿದ್ದವು. ಅವರ ಕೀರ್ತನೆಗಳನ್ನು ಕೇಳಿಯೇ ಆ ಎಳೆಯ ಚಿಕ್ಕ ವಯಸ್ಸಿನಲ್ಲಿಯೇ ನನ್ನ ಮನಸ್ಸು ಆಧ್ಯಾತ್ಮಿಕ ತತ್ವಗಳ ಕಡೆಗೆ ಆಕ ರ್ಷಿಸಿತು. ಇಂದು ಅವರ ಶಿಷ್ಯವೃಂದವು ನಾಡಿನ ಮೂಲೆ ಮೂಲೆಗಳಲ್ಲಿ ಜಾತಿ, ಕುಲ, ಭೇದಗಳನ್ನೆಣಿಸದೇ ಮಾನವಧರ್ಮ ಕಲ್ಯಾಣ ಸಾಧಿಸುತ್ತಿದ್ದಾರೆ. ಇಂತಹ ಉದಾಹರಣೆಗಳು ನಮ್ಮ ದೇಶದಲ್ಲಿ ಅನೇಕ ಸಿಗುತ್ತವೆ. ಆದರೆ ಪಂ. ಪಂಚಾಕ್ಷರ ಗವಾಯಿಗಳವರು ಮತ್ತು ಪಂ. ಪುಟ್ಟರಾಜ ಗವಾಯಿಗಳವರು ಮತ್ತು ಅವರ ಶಿಷ್ಯ ವೃಂದದವರಂಥ ಉದಾಹರಣೆಗಳು ಸಿಗುವುದು ವಿರಳ.)

ಶಿವಲಿಂಗ ಪೂಜೆಯ ವಿಧಾನಗಳು ಮುಗಿದ ನಂತರ ಅಂದರೆ ವಿಭೂತಿ, ಗಂಧ, ಅಕ್ಷತೆ, ಹೂವು, ಬಿಲ್ವಪತ್ರಿ, ಧೂಪ, ದೀಪ, ನೈವೇದ್ಯ ಮೊದಲಾದ ಕಾರ್ಯಗಳು ಮುಗಿದ ನಂತರ ಶಾಂತ ಮುದ್ರೆಯಿಂದ ಮೂಗಿನ ತುದಿಯ ಮೇಲೆ ದೃಷ್ಟಿಯನ್ನಿಟ್ಟು, ಅದರ ಮುಖಾಂತರ ಲಿಂಗದ ಮಧ್ಯದಲ್ಲಿ ಹೊಳೆಯುತ್ತಿರುವ ಜ್ಯೋತಿ ಬಿಂದುವನ್ನು

ಶಾಂತದೃಷ್ಟಿಯಿಂದಲೂ, ಭಕ್ತಿಯಿಂದಲೂ. ಸದ್ಗುರುಗಳು ಗೌಪ್ಯವಾಗಿ ಹೇಳಿಕೊಟ್ಟಿರುವ, ಪ್ರಣವದ ಮಹಾಮಂತ್ರವನ್ನು ಮನಸ್ಸಿನಲ್ಲಿಯೇ ಅನ್ನುತ್ತ ಮನಸ್ಸು ಚಂಚಲವಾಗದಂತೆ ತಲೆಯನ್ನು ಅತ್ತ ಇತ್ತ ಹೊರಳಾಡಿಸದೇ ನೋಡುತ್ತಿರಬೇಕು. ನನ್ನ ಅಂದಾಜಿನಂತೆ ಪ್ರತಿದಿನದಲ್ಲಿ ನಲವತ್ತೈದು ನಿಮಿಷಗಳಿಗಿಂದ ಕಡಿಮೆ ಅಲ್ಲದಷ್ಟು ಸಮಯದವರೆಗೆ ನೋಡುತ್ತಿರುವಾಗ ನಮ್ಮ ಅಕ್ಷಿಪಟಲಗಳು ನೋಯಲು ಪ್ರಾರಂಭಿಸಿ ಕಣ್ಣೊಳಗಿಂದ ಉಪ್ಪಿನಂತಹ ನೀರು, ಬಿಸಿನೀರು ಅನಂತರ ಎಣ್ಣೆ ಜಿಗಿಯಂತ ನೀರು ಬರಲು ಪ್ರಾರಂಭಿಸುತ್ತದೆ. ತೊಂದರೆ ಆದರೂ ಸಹಿತ ಕಣ್ಣು ಮುಚ್ಚದಂತೆ ಕೆಳಗಿನ ನೀರನ್ನು ಮಾತ್ರ ಸಾವಕಾಶವಾಗಿ ಒರೆಸಿಕೊಳ್ಳಬಹುದು. ಅಕ್ಷಿಪಟಲಗಳಲ್ಲಿ ನೋವು ಉಂಟಾದಾಗ ಕಣ್ಣಿನಸುತ್ತಲೂ ರಕ್ತ ಬಿಸಿಯಾಗಿರುತ್ತದೆ. ಈ ಉಷ್ಣತೆಯಿಂದ ಉತ್ಪನ್ನವಾಗುವ ಸೂಕ್ಷ್ಮ ವಿದ್ಯುತ್ ಅಂಶವು ಕಣ್ಣುಗೊಂಬೆಯಲ್ಲಿರುವ ವಿದ್ಯುತ್ ಅಂಶಕ್ಕೆ ಚೈತನ್ಯಕೊಡುತ್ತದೆ. ಇದರ ಮುಖಾಂತರ ಮೆದುಳಿನ ನಡುಮಧ್ಯದ ಕೆಳಗೆ ಇರುವ " ಪಿಟ್ಯೂಚರಿಗ್ಲ್ಯಾಂಡ್ (ಇದಕ್ಕೆ ಸರ್ವಗ್ರಂಥಿನಿಯಂತ್ರಕ ಎಂದು ಹೆಸರು ) ಗೆ ಚೇತನಕೊಡುತ್ತದೆ. ಇದು ವಿಶೇಷ ಚೇತನಗೊಂಡಾಗ ಮೆದುಳಿನಲ್ಲಿರುವ ಜ್ಞಾನ ವಿಭಾಗ ಮೋಟರ್ ವಿಭಾಗ, ಚೇತನಗೊಂಡು, ಮೋಟರ್ ವಿಭಾಗವು ಇಲೆಕ್ಟ್ರಿಕ್ ಎಂಜಿನ್‌ನಲ್ಲಿಯ ಮೋಟರ್ ಮಶಿನ್‌ನಂತೆ ಕಾರ್ಯಮಾಡುತ್ತದೆ. ಬಿಟ್ಟೂಬಿಡದೆ ಕಣ್ಣು ಪಿಳುಕಿಸದಂತೆ ಮೂರುದಿನ ಕುಳಿತರೆ ನಾಲ್ಕನೆಯ ದಿನದ ಪ್ರಾರಂಭಕ್ಕೆ ದೊಡ್ಡ ಮೆದುಳಿನಲ್ಲಿ ಉಂಟಾಗಿರುವ ವಿದ್ಯುತ್ ಅಂಶಯುಕ್ತ ಚೈತನ್ಯವು, ಸಣ್ಣ ಮೆದುಳು, ಮೆದುಳುಬಳ್ಳಿ (ಜ್ಞಾನತಂತು)ಗಳ ಮುಖಾಂತರ ಇಡೀ ಶರೀರದಲ್ಲಿ ಹರಿದಾಡಲಿಕ್ಕೆ ಪ್ರಾರಂಭಿಸುತ್ತದೆ. ನಾಲ್ಕನೆಯ ದಿನದಲ್ಲಿ ಅತೀ ಹೆಚ್ಚಾಗಿ ತಲೆಯ ರಂಧ್ರಗಳ ಮುಖಾಂತರ ಹೊರಹೊಮ್ಮಿ ತಲೆಯ ಮೇಲೆ ಮೂರು ಮೊಳಬಿಟ್ಟು " ಹಾಲಿನ ಬಣ್ಣದ ಬಲ್ಬ" ದಂತೆ ಚಿಕ್ಕ ಪ್ರಕಾಶವು ಬೆಳ್ಳಗೆ ಕಾಣಿಸತೊಡಗುತ್ತದೆ. ಬರಬರುತ್ತಾ ಖೋಲಿಯ ತುಂಬಾ ಬೆಳಕು ಬಿದ್ದಿದೆ ಎಂಬಂತೆ ಅನಿಸುತ್ತದೆ. ಇವೇ ವಿಶ್ವಕಿರಣ (Cosmicrays) ಗಳೆಂದು ನನ್ನ ತರ್ಕವಾಗಿದೆ. ಯಾಕೆಂದರೆ "ಯಥಾ ಬ್ರಹ್ಮಾಂಡಃ ತಥಾ ಪಿಂಡಾಂಡಃ" ಎಂಬುವ ಶಾಸ್ತ್ರೋಕ್ತಿಯಂತೆ ವಿಚಾರಿಸಿದರೆ ಶರೀರಕ್ಕೂ ಬ್ರಹ್ಮಾಂಡಕ್ಕೂ ಸಂಬಂಧ ಇದ್ದೇ ಇದೆ. ಬ್ರಹ್ಮಾಂಡದ ವಿಶ್ವ ಕಿರಣಗಳ ಸಂಯೋಗವು ನಮ್ಮ ಶರೀರದೊಡನೆಯೂ ಹೊಂದಿಕೊಂಡಿರುತ್ತದೆ. ಇವೇ ವಿಶ್ವಕಿರಣಗಳಿಗೆ ನಮ್ಮ ಪೂರ್ವಜರು ಅಮೃತ ಕಿರಣಗಳೆಂದು ಕರೆದರು.

ಐದನೆಯ ದಿನದಲ್ಲಿ ನಮ್ಮ ಅಂಗೈ ಮತ್ತು ಅಂಗಾಲು ಪಾದಗಳಲ್ಲಿ ಎಣ್ಣೆಯ ಜಿಗಿಯಂತಹ ಅಂಟುಅಂಟಾದ ರಸ ತೆಳ್ಳಗೆ ಸವರಿಕೊಂಡಂತೆ ಆಗಿರುತ್ತದೆ. ಅವನ್ನು ನೆಕ್ಕಿನೋಡಿದರೆ ಸಕ್ಕರೆಯಂತೆ ರುಚಿಯಾಗಿರುತ್ತದೆ. ಅಂಥ ಶಿವಯೋಗಿಗಳ ಪಾದೋದಕ ತೆಗೆದುಕೊಳ್ಳುವುದರಿಂದ ಆ ಪುಣ್ಯಮಯ ಶಿವಯೋಗಿಗಳ ಶಿವಯೋಗದ ಅಂಶವು

ನಮ್ಮ ಶರೀರದಲ್ಲಿಯೂ ಕೂಡಿಕೊಂಡು ಧನ್ಯರಾಗುತ್ತೇವೆ. ಇಲ್ಲಿ ಪಾದೋದಕ ತೆಗೆದುಕೊಳ್ಳುವಾಗ ಸದ್ಗುರುವಿನ ಅಂತಃಕರಣಮಯ ಕೃಪೆ ಮತ್ತು ಭಕ್ತನ ಪವಿತ್ರ ಹೃದಯ ಎರಡೂ ಕೂಡಿರಬೇಕು ಅಂದರೆ ಭಕ್ತನ ಕಲ್ಯಾಣ ಸಾಧ್ಯ. ಸದ್ಗುರುವಿನ ಮನಸ್ಸು ಭಕ್ತನ ಕಲ್ಯಾಣಕ್ಕಾಗಿಯೇ ಇರುತ್ತದೆ. ಆದರೆ ಪಾದೋದಕ ತೆಗೆದು ಕೊಳ್ಳುವಾಗ ಮನಸ್ಸು ಚಂಚಲಮಯ ಹೊಲಸಾಗಿದ್ದರೆ ಭಕ್ತನಿಗೆ ಮುಂದೆ ಬರ ಬರುತ್ತಾ ಬಹಳ ದೊಡ್ಡ ಅನಾಹುತಗಳಾಗುತ್ತವೆ. ಸದಾಚಾರಿಯಲ್ಲದ ಗುರುವಿನ ಪಾದೋದಕ ತೆಗೆದುಕೊಳ್ಳಬಾರದು. ಲಿಂಗದ ಮಧ್ಯದಲ್ಲಿ ಮಿನುಗುತ್ತಿರುವ ಕೇಂದ್ರ ಜ್ಯೋತಿಬಿಂದುವಿಗೆ ನಮ್ಮ ಕಣ್ಣುಗಳು ನೇರವಾದಾಗ ಪುನಃ ಈ ಪ್ರಕಾಶವು ಕಾಣಲು ಪ್ರಾರಂಭಿಸುತ್ತದೆ. ಕಾರಣ ಪೂಜೆಗೆ ಕುಳಿತಿರುವಾಗ ಚಂಚಲ ಮನಸ್ಸಿನಿಂದ ಕಣ್ಣು ಗಳನ್ನು ಅತ್ತ ಇತ್ತ ಹೊರಳಿಸಬಾರದು. ಈ ರೀತಿ ಏಕಾಗ್ರಚಿತ್ತದಿಂದಲೂ ಶಾಂತ ದೃಷ್ಟಿಯಿಂದಲೂ ಲಿಂಗದ ಮಧ್ಯದಲ್ಲಿ ಮಿನುಗುತ್ತಿರುವ ಜ್ಯೋತಿ ಬಿಂದುವನ್ನು ನೋಡುತ್ತಿರುವಂತೆಯೇ, ಆ ಜ್ಯೋತಿ ಬಿಂದುವಿನಿಂದ ಸುದರ್ಶನ ಚಕ್ರದಂತೆ ಸಣ್ಣಾಗಿರುತ್ತಿರುವ ಜ್ಯೋತಿಯೊಂದು ಹೊರಗೆಬಂದಂತೆ ಕಾಣಿಸತೊಡಗುತ್ತದೆ. ಮೊದಲು ಎರಡು ಬೆರಳಿನಷ್ಟು, ಅನಂತರ ನಾಲ್ಕು ಬೆರಳಿನಷ್ಟು, ಒಂದು ಚೋಟು ಒಂದು ಗೇಣು ಒಂದು ಮೊಳ, ಹೀಗೆ ಪ್ರತಿ ಎರಡು ನಿಮಿಷಗಳಿಗೆ ಒಂದು ಸಾರೆ ಯಂತೆ ಹೆಚ್ಚುಹೆಚ್ಚಾಗಿ ಮುಂದೆ ಬರುತ್ತದೆ, ಪುನಃ ಅಡಗಿಕೊಳ್ಳುತ್ತದೆ. ೪೫ ನಿಮಿಷ ಇಲ್ಲವೆ ಒಂದು ಘಂಟೆಯವರೆಗೆ ಈ ರೀತಿ ಹೋರಾಟ ನಡೆದು ಕಡೆಗೆ ಬಾಣದಂತೆ ಸರ್ರನೇ ಮುಂದೆ ಬಂದು ನೇರವಾಗಿ ನಮ್ಮ ಕಡೆಗೆ ಬಂದು ಮುಟ್ಟಿ ವಿಶ್ವಕಿರಣಗಳಲ್ಲಿ ಸಮಾವೇಶಗೊಳ್ಳುತ್ತದೆ. ಈ ಸಮಯದಲ್ಲಿ ಭ್ರೂಮಧ್ಯದಲ್ಲಿರುವ ಪೀನಿಯಲ್ ಕಣ್ಣು ಪೂರ್ಣ ಸಚೇತನಗೊಂಡು ತೆರೆಯುತ್ತದೆ. ಆಗ ಮೆದುಳಿನ ಹಿಂಭಾಗ ಪಶ್ಚಿಮ ಚಕ್ರ ಮತ್ತು ಮೆದುಳಿನ ನಡುಭಾಗದಲ್ಲಿ ಶಿಡಿಲು ಹೊಡೆದಂತೆ ಆಗಿ ಬವಳಿ ಬಂದು ಬೀಳುವ ಸಂಭವ ಇರುತ್ತದೆ ಆಗ ನಮ್ಮ ತಲೆಯನ್ನು ಸ್ವಲ್ಪ ಹಿಂದಕ್ಕೆ ಸರಿಸಿದರೆ ಚಕ್ಕರ ಬರುವುದು ತಪ್ಪುತ್ತದೆ. ಆದರೆ ನಮ್ಮ ಕಣ್ಣುಗಳು ಲಿಂಗದಲ್ಲಿಯ ಕೇಂದ್ರ ಬಿಂದುವಿಗೆ ನೇರವಾಗಿರಬೇಕು ಎಂಬುದನ್ನು ಮರೆಯಬಾರದು. ಪೀನಿಯಲ್ ಕಣ್ಣು ಚೇತನಗೊಂಡಾಗ ಮೆದುಳಿನಲ್ಲಿಯ ಜ್ಞಾನ ವಿಭಾಗವೂ ಚೇತನಗೊಳ್ಳುತ್ತದೆ.

ನಮ್ಮ ತಲೆಯ ಮೇಲೆ ಕಾಣಿಸಕೊಳ್ಳುವ ವಿಶ್ವಕಿರಣಗಳು ಬ್ರಹ್ಮಾಂಡದೊಳಗಿನ ದೃಶ್ಯಗಳನ್ನೆಲ್ಲಾ ಹೀರಿಕೊಂಡವುಗಳಾಗಿರುತ್ತವೆ ದೃಷ್ಟಿ ಸ್ಥಿರವಾದಂತೆಲ್ಲಾ ಅಂಗೈ ಮೇಲಿನ ಲಿಂಗದ ಮುಂದೆ, ೨ ಫೂಟು ಉದ್ದ, ೧ ಫೂಟು ಎತ್ತರ ಇದ್ದಂತಹ ಒಂದು ತೆಳ್ಳನ್ನ ಕನ್ನಡಿಯಂತೆ ಪರದೆ ಕಾಣಿಸಿಕೊಳ್ಳುತ್ತದೆ. ನಮ್ಮ ಅಂಗೈ ಮೇಲೆ ಲಿಂಗ ಇದ್ದರೂ ಅದೃಶ್ಯವಾಗಿದ್ದಂತೆ ಕಾಣತೊಡಗುತ್ತದೆ. ಈ ಪರದೆಯಲ್ಲಿ ಮೊದಲು ನಮ್ಮ ಎರಡು ಕಣ್ಣುಗಳು ಪ್ರಾರಂಭಿಸಿ ಅನಂತರ ನಮ್ಮ ಮುಖ ಮಸಕು ಮಸಕಾಗಿ

ಶಾಂತದೃಷ್ಟಿಯಿಂದಲೂ, ಭ್ರೂ
ರುವ, ಪ್ರಣವದ ಮಹಾಮಂತ್ರವನ್ನು ಮನಸ್ಸಿನಲ್ಲಿಯೇ ಅನ್ನುತ್ತ ಮನಸ್ಸು ಚಂಚಲ
ವಾಗದಂತೆ ತಲೆಯನ್ನು ಅತ್ತ ಇತ್ತ ಹೊರಳಾಡಿಸದೇ ನೋಡುತ್ತಿರಬೇಕು. ನನ್ನ
ಅಂದಾಜಿನಂತೆ ಪ್ರತಿದಿನದಲ್ಲಿ ನಲವತ್ತೈದು ನಿಮಿಷಗಳಿಗಿಂದ ಕಡಿಮೆ ಅಲ್ಲದಷ್ಟು
ಸಮಯದವರೆಗೆ ನೋಡುತ್ತಿರುವಾಗ ನಮ್ಮ ಅಕ್ಷಿಪಟಲಗಳು ನೋಯಲು ಪ್ರಾರಂಭಿಸಿ
ಕಣ್ಣೊಳಗಿಂದ ಉಪ್ಪಿನಂತಹ ನೀರು, ಬಿಸಿನೀರು ಆನಂತರ ಎಣ್ಣೆ ಜಿಗಿಯಂತ ನೀರು
ಬರಲು ಪ್ರಾರಂಭಿಸುತ್ತದೆ. ತೊಂದರೆ ಆದರೂ ಸಹಿತ ಕಣ್ಣುಮುಚ್ಚದಂತೆ ಕೆಳಗಿನ
ನೀರನ್ನು ಮಾತ್ರ ಸಾವಕಾಶವಾಗಿ ಒರೆಸಿಕೊಳ್ಳಬಹುದು. ಅಕ್ಷಿಪಟಲಗಳಲ್ಲಿ ನೋವು
ಉಂಟಾದಾಗ ಕಣ್ಣಿನಸುತ್ತಲೂ ರಕ್ತ ಬಿಸಿಯಾಗಿರುತ್ತದೆ. ಈ ಉಷ್ಣತೆಯಿಂದ
ಉತ್ಪನ್ನವಾಗುವ ಸೂಕ್ಷ್ಮ ವಿದ್ಯುತ್ ಅಂಶವು ಕಣ್ಣುಗೊಂಬೆಯಲ್ಲಿರುವ ವಿದ್ಯುತ್
ಅಂಶಕ್ಕೆ ಚೈತನ್ಯಕೊಡುತ್ತದೆ ಇದರ ಮುಖಾಂತರ ಮೆದುಳಿನ ನಡುಮಧ್ಯದ ಕೆಳಗೆ
ಇರುವ "ಪಿಟ್ಯೂಚರಿಗ್ಲ್ಯಾಂಡ್ (ಇದಕ್ಕೆ ಸರ್ವಗ್ರಂಥಿನಿಯಂತ್ರಕ ಎಂದು ಹೆಸರು ) ಗೆ
ಚೇತನಕೊಡುತ್ತದೆ. ಇದು ವಿಶೇಷ ಚೇತನಗೊಂಡಾಗ ಮೆದುಳಿನಲ್ಲಿರುವ ಜ್ಞಾನ
ವಿಭಾಗ ಮೋಟರ್ ವಿಭಾಗ, ಚೇತನಗೊಂಡು, ಮೋಟರ್ ವಿಭಾಗವು ಇಲೆಕ್ಟ್ರಿಕ್
ಎಂಜಿನ್‌ನಲ್ಲಿಯ ಮೋಟರ್ ಮಶಿನ್‌ನಂತೆ ಕಾರ್ಯಮಾಡುತ್ತದೆ. ಬಿಟ್ಟೂಬಿಡದೆ
ಕಣ್ಣು ಪಿಳುಕಿಸದಂತೆ ಮೂರುದಿನ ಕುಳಿತರೆ ನಾಲ್ಕನೆಯ ದಿನದ ಪ್ರಾರಂಭಕ್ಕೆ ದೊಡ್ಡ
ಮೆದುಳಿನಲ್ಲಿ ಉಂಟಾಗಿರುವ ವಿದ್ಯುತ್ ಅಂಶಯುಕ್ತ ಚೈತನ್ಯವು, ಸಣ್ಣ ಮೆದುಳು,
ಮೆದುಳುಬಳ್ಳಿ (ಜ್ಞಾನತಂತು)ಗಳ ಮುಖಾಂತರ ಇಡೀ ಶರೀರದಲ್ಲಿ ಹರಿದಾಡಲಿಕ್ಕೆ
ಪ್ರಾರಂಭಿಸುತ್ತದೆ. ನಾಲ್ಕನೆಯ ದಿನದಲ್ಲಿ ಅತೀ ಹೆಚ್ಚಾಗಿ ತಲೆಯ ರಂದ್ರಗಳ
ಮುಖಾಂತರ ಹೊರಹೊಮ್ಮಿ ತಲೆಯ ಮೇಲೆ ಮೂರು ನೋಬಿಟ್ಟು " ಹಾಲಿನ ಬಣ್ಣದ
ಬಲ್ಬ" ದಂತೆ ಚಿಕ್ಕ ಪ್ರಕಾಶವು ಬೆಳ್ಳಗೆ ಕಾಣಿಸತೊಡಗುತ್ತದೆ. ಬರಬರುತ್ತಾ
ಖೋಲಿಯ ತುಂಬಾ ಬೆಳಕು ಬಿದ್ದಿದೆ ಎಂಬಂತೆ ಅನಿಸುತ್ತದೆ. ಇವೇ ವಿಶ್ವಕಿರಣ
(Cosmicrays) ಗಳೆಂದು ನನ್ನ ತರ್ಕವಾಗಿದೆ. ಯಾಕೆಂದರೆ "ಯಥಾ ಬ್ರಹ್ಮಾಂಡಃ
ತಥಾ ಪಿಂಡಾಂಡಃ" ಎಂಬುವ ಶಾಸ್ತ್ರೋಕ್ತಿಯಂತೆ ವಿಚಾರಿಸಿದರೆ ಶರೀರಕ್ಕೂ
ಬ್ರಹ್ಮಾಂಡಕ್ಕೂ ಸಂಬಂಧ ಇದ್ದೇ ಇದೆ. ಬ್ರಹ್ಮಾಂಡದ ವಿಶ್ವ ಕಿರಣಗಳ ಸಂಯೋಗವು
ನಮ್ಮ ಶರೀರದೊಡನೆಯೂ ಹೊಂದಿಕೊಂಡಿರುತ್ತದೆ. ಇವೇ ವಿಶ್ವಕಿರಣಗಳಿಗೆ ನಮ್ಮ
ಪೂರ್ವಜರು ಅಮೃತ ಕಿರಣಗಳೆಂದು ಕರೆದರು.

ಐದನೆಯ ದಿನದಲ್ಲಿ ನಮ್ಮ ಅಂಗೈ ಮತ್ತು ಅಂಗಾಲು ಪಾದಗಳಲ್ಲಿ ಎಣ್ಣೆಯ
ಜಿಗಿಯಂತಹ ಅಂಟುಅಂಟಾದ ರಸ ತೆಳ್ಳಗೆ ಸವರಿಕೊಂಡಂತೆ ಆಗಿರುತ್ತದೆ. ಅದನ್ನು
ನೆಕ್ಕಿನೋಡಿದರೆ ಸಕ್ಕರೆಯಂತೆ ರುಚಿಯಾಗಿರುತ್ತದೆ. ಅಂಥ ಶಿವಯೋಗಿಗಳ ಪಾದೋ
ದಕ ತೆಗೆದುಕೊಳ್ಳುವುದರಿಂದ ಆ ಪುಣ್ಯಮಯ ಶಿವಯೋಗಿಗಳ ಶಿವಯೋಗದ ಅಂಶವು

ನಮ್ಮ ಶರೀರದಲ್ಲಿಯೂ ಕೂಡಿಕೊಂಡು ಧನ್ಯರಾಗುತ್ತೇವೆ. ಇಲ್ಲಿ ಪಾದೋದಕ ತೆಗೆದುಕೊಳ್ಳುವಾಗ ಸದ್ಗುರುವಿನ ಅಂತಃಕರಣಮಯ ಕೃಪೆ ಮತ್ತು ಭಕ್ತನ ಪವಿತ್ರ ಹೃದಯ ಎರಡೂ ಕೂಡಿರಬೇಕು ಅಂದರೆ ಭಕ್ತನ ಕಲ್ಯಾಣ ಸಾಧ್ಯ. ಸದ್ಗುರುವಿನ ಮನಸ್ಸು ಭಕ್ತನ ಕಲ್ಯಾಣಕ್ಕಾಗಿಯೇ ಇರುತ್ತದೆ. ಆದರೆ ಪಾದೋದಕ ತೆಗೆದು ಕೊಳ್ಳುವಾಗ ಮನಸ್ಸು ಚಂಚಲಮಯ ಹೊಲಸಾಗಿದ್ದರೆ ಭಕ್ತನಿಗೆ ಮುಂದೆ ಬರ ಬರುತ್ತಾ ಬಹಳ ದೊಡ್ಡ ಅನಾಹುತಗಳಾಗುತ್ತವೆ. ಸದಾಚಾರಿಯಲ್ಲದ ಗುರುವಿನ ಪಾದೋದಕ ತೆಗೆದುಕೊಳ್ಳಬಾರದು. ಲಿಂಗದ ಮಧ್ಯದಲ್ಲಿ ಮಿನುಗುತ್ತಿರುವ ಕೇಂದ್ರ ಜ್ಯೋತಿಬಿಂದುವಿಗೆ ನಮ್ಮ ಕಣ್ಣುಗಳು ನೇರವಾದಾಗ ಪುನಃ ಈ ಪ್ರಕಾಶವು ಕಾಣಲು ಪ್ರಾರಂಭಿಸುತ್ತದೆ. ಕಾರಣ ಪೂಜೆಗೆ ಕುಳಿತಿರುವಾಗ ಚಂಚಲ ಮನಸ್ಸಿನಿಂದ ಕಣ್ಣು ಗಳನ್ನು ಅತ್ತ ಇತ್ತ ಹೊರಳಿಸಬಾರದು. ಈ ರೀತಿ ಏಕಾಗ್ರಚಿತ್ತದಿಂದಲೂ ಶಾಂತ ದೃಷ್ಟಿಯಿಂದಲೂ ಲಿಂಗದ ಮಧ್ಯದಲ್ಲಿ ಮಿನುಗುತ್ತಿರುವ ಜ್ಯೋತಿ ಬಿಂದುವನ್ನು ನೋಡುತ್ತಿರುವಂತೆಯೇ, ಆ ಜ್ಯೋತಿ ಬಿಂದುವಿನಿಂದ ಸುದರ್ಶನ ಚಕ್ರದಂತೆ ಸಣ್ಣಾಗಿರುತ್ತಿರುವ ಜ್ಯೋತಿಯೊಂದು ಹೊರಗೆಬಂದಂತೆ ಕಾಣಿಸತೊಡಗುತ್ತದೆ. ಮೊದಲು ಎರಡು ಬೆರಳಿನಷ್ಟು, ಅನಂತರ ನಾಲ್ಕು ಬೆರಳಿನಷ್ಟು, ಒಂದು ಚೋಟು ಒಂದು ಗೇಣು ಒಂದು ಮೊಳ, ಹೀಗೆ ಪ್ರತಿ ಎರಡು ನಿಮಿಷಗಳಿಗೆ ಒಂದು ಸಾರೆ ಯಂತೆ ಹೆಚ್ಚುಹೆಚ್ಚಾಗಿ ಮುಂದೆ ಬರುತ್ತದೆ, ಪುನಃ ಅಡಗಿಕೊಳ್ಳುತ್ತದೆ. ೪೫ ನಿಮಿಷ ಇಲ್ಲವೆ ಒಂದು ಘಂಟೆಯವರೆಗೆ ಈ ರೀತಿ ಹೋರಾಟ ನಡೆದು ಕಡೆಗೆ ಬಾಣದಂತೆ ಸರ್ರನೇ ಮುಂದೆ ಬಂದು ನೇರವಾಗಿ ನಮ್ಮ ಕಡೆಗೆ ಬಂದು ಮುಟ್ಟಿ ವಿಶ್ವಕಿರಣಗಳಲ್ಲಿ ಸಮಾವೇಶಗೊಳ್ಳುತ್ತದೆ. ಈ ಸಮಯದಲ್ಲಿ ಭ್ರೂಮಧ್ಯದಲ್ಲಿರುವ ಪೀನಿಯಲ್ ಕಣ್ಣು ಪೂರ್ಣ ಸಚೇತನಗೊಂಡು ತೆರೆಯುತ್ತದೆ. ಆಗ ಮೆದುಳಿನ ಹಿಂಭಾಗ ಪಶ್ಚಿಮ ಚಕ್ರ ಮತ್ತು ಮೆದುಳಿನ ನಡುಭಾಗದಲ್ಲಿ ಸಿಡಿಲು ಹೊಡೆದಂತೆ ಆಗಿ ಬವಳಿ ಬಂದು ಬೀಳುವ ಸಂಭವ ಇರುತ್ತದೆ ಆಗ ನಮ್ಮ ತಲೆಯನ್ನು ಸ್ವಲ್ಪ ಹಿಂದಕ್ಕೆ ಸರಿಸಿದರೆ ಚಕ್ಕರ ಬರುವುದು ತಪ್ಪುತ್ತದೆ. ಆದರೆ ನಮ್ಮ ಕಣ್ಣುಗಳು ಲಿಂಗದಲ್ಲಿಯ ಕೇಂದ್ರ ಬಿಂದುವಿಗೆ ನೇರವಾಗಿರಬೇಕು ಎಂಬುದನ್ನು ಮರೆಯಬಾರದು. ಪೀನಿಯಲ್ ಕಣ್ಣು ಚೇತನಗೊಂಡಾಗ ಮೆದುಳಿನಲ್ಲಿಯ ಜ್ಞಾನ ವಿಭಾಗವೂ ಚೇತನಗೊಳ್ಳುತ್ತದೆ.

ನಮ್ಮ ತಲೆಯ ಮೇಲೆ ಕಾಣಿಸಕೊಳ್ಳುವ ವಿಶ್ವಕಿರಣಗಳು ಬ್ರಹ್ಮಾಂಡದೊಳಗಿನ ದೃಶ್ಯಗಳನ್ನೆಲ್ಲಾ ಹೀರಿಕೊಂಡವುಗಳಾಗಿರುತ್ತವೆ ದೃಷ್ಟಿ ಸ್ಥಿರವಾದಂತೆಲ್ಲಾ ಅಂಗೈ ಮೇಲಿನ ಲಿಂಗದ ಮುಂದೆ, ೨ ಫೂಟು ಉದ್ದ, ೧ ಫೂಟು ಎತ್ತರ ಇದ್ದಂತಹ ಒಂದು ತೆಳ್ಳನ್ನ ಕನ್ನಡಿಯಂತೆ ಪರದೆ ಕಾಣಿಸಿಕೊಳ್ಳುತ್ತದೆ. ನಮ್ಮ ಅಂಗೈ ಮೇಲೆ ಲಿಂಗ ಇದ್ದರೂ ಅದೃಶ್ಯವಾಗಿದ್ದಂತೆ ಕಾಣತೊಡಗುತ್ತದೆ. ಈ ಪರದೆಯಲ್ಲಿ ಮೊದಲು ನಮ್ಮ ಎರಡು ಕಣ್ಣುಗಳು ಪ್ರಾರಂಭಿಸಿ ಅನಂತರ ನಮ್ಮ ಮುಖ ಮಸಕು ಮಸಕಾಗಿ

ಕಾಣಿಸಿಕೊಳ್ಳುತ್ತದೆ. ತಲೆಯ ಮೇಲ್ಭಾಗದ ಮೇಲೆ ಕಾಣಿಸಿಕೊಳ್ಳುವ ವಿಶ್ವಕಿರಣ (Cosmicrays) ಗಳು ಸಿನೆಮಾ ಪ್ರಾಜಕ್ಟರ್‌ನ ಮೇಲ್ಭಾಗದಲ್ಲಿ ಚಿತ್ರದ ಕಥೆ ಯನ್ನೆಲ್ಲಾ ಸುರುಳಿಸುತ್ತಿಕೊಂಡಿರುವ "ಫಿಲ್ಮ ಚೇಂಬರ್" ಇದ್ದಂತೆ; ನಮ್ಮ ಹೃದಯವು ಕೆಳಗಿನ ಫಿಲ್ಮಚೇಂಬರ್ ಇದ್ದಂತೆ. ನಾವು ಇಚ್ಛಿಸಿದ ದೃಶ್ಯಗಳೆಲ್ಲಾ ವಿಶ್ವಕಿರಣಗಳಿಂದ ಹೊರಟು ಪೀನಿಯಲ್ ಕಣ್ಣಿನ (ಈಗ ಇದು ಫಿಲ್ಮಪ್ರಾಜಕ್ಟರ್ ನಲ್ಲಿಯ ಲೆನ್ಸನಂತೆ ಕಾರ್ಯಮಾಡುತ್ತದೆ) ಲೆನ್ಸನ ಮುಖಾಂತರ ಲಿಂಗದ ಮುಂದಿನ ಪರದೆಯ ಮೇಲೆ ಬೀಳುತ್ತವೆ. ನಾವು ನಮ್ಮ ಎರಡೂ ಕಣ್ಣುಗಳಿಂದ ಆ ದೃಶ್ಯ ಗಳನ್ನು ನೋಡುತ್ತೇವೆ. ಮೊದಲು ಗೋಡೆಯ ಮೇಲಿನ ಸಪ್ಪೆಕರಿಯ ಬಣ್ಣದ ಗೊಂಬೆಗಳಂತೆ ಕಾಣುತ್ತವೆ. ಸಾಧನೆ ಹೆಚ್ಚಾದಂತೆ ವರ್ಣಚಿತ್ರಗಳನ್ನು ಇದ್ದ ಕ್ಕಿದ್ದಂತೆ ನೋಡಬಹುದು. ಒಂದೊಂದು ಸಾರೆ ಭಕ್ತನು ಎಷ್ಟೇ ದೂರವಿದ್ದರೂ ಭಕ್ತನು ಏಕಾಗ್ರ ಚಿತ್ತದಿಂದ ಗುರುವಿನ ಸ್ಮರಣೆ ಮಾಡಿದಾಗ ಸದ್ಗುರುವು ತನ್ನ ಲಿಂಗ ಪೂಜೆಯಲ್ಲಿ ಆ ದೃಶ್ಯವನ್ನು ಕಾಣಬಹುದು. ಕೆಲವರಿಗೆ ಸ್ವಪ್ನದಲ್ಲಿಯಾದರೂ ಮುಂದಿನ ಭವಿಷ್ಯವನ್ನು ಕಾಣಬಹುದು ಇಂತಹ ಲಕ್ಷ ಪ್ರಯೋಗ ಪೂಜೆಗಳ ನಂತರ ಪೂರ್ಣ ಶಿವಯೋಗವನ್ನು ಸಾಧಿಸಬಹುದೆಂದು ನನ್ನ ಅಂದಾಜು.

ಉಸಿರಾಟದ (ಪ್ರಾಣಾಯಾಮ) ನಿಯಮವನ್ನರಿತು, ಬೆಳಕು ಮತ್ತು ಶಬ್ದ ವೇಗ(ಧ್ವನಿ)ಗಳನ್ನು ಅರಿತುಕೊಂಡು, ಪ್ರಾಣಾಯಾಮದ ಮುಖಾಂತರ ನಿಯಂತ್ರಣದ ಸಾಧನೆಯನ್ನು ಲಿಂಗಪೂಜೆಯಲ್ಲಿಯೇ ಸಾಧಿಸಿಕೊಂಡರೆ, ದೂರಶ್ರವಣ (ಟೆಲಿವ್ಹಿಜನ ಮತ್ತು ರೇಡಿಯೋ ಆ್ಯಕ್ಟಿವ್ಹಿಟೀಜಾ)ಗಳನ್ನು ಲಿಂಗಪೂಜೆಯಲ್ಲಿಯೇ ನೋಡಿ ಕೇಳ ಬಹುದು. ಹವೆಯ ಏಳು ಘಟಕಗಳಲ್ಲಿ ಒಂದಾದ ಈಥರ್‌ವಾಯು ಒಂದು ಸೆಕೆಂಡ್ ನಲ್ಲಿ ಈ ಪೃಥ್ವಿಯನ್ನು ಏಳುಸಾರೆ ಸುತ್ತು ಹಾಕುತ್ತದೆ. ಪೂರ್ಣ ಶಿವಯೋಗ ಸಾಧ ನೆಯ ಸಿದ್ಧಾವಸ್ಥೆಯಲ್ಲಿರುವಾಗ, ಶರೀರದ ತುಂಬೆಲ್ಲಾ ವ್ಯಾಪಿಸಿಕೊಂಡಿರುವ ವಿದ್ಯುತ್ ಮತ್ತು ಅಮೃತ ಕಿರಣಗಳು ಈಥರ್‌ನಲ್ಲಿಯ ಶಬ್ದ (ಧ್ವನಿ)ತರಂಗಗಳನ್ನು ಗ್ರಹಿಸಿ ಕೊಳ್ಳುತ್ತವೆ. ಈ ಸ್ಥಿತಿಯಲ್ಲಿಯೇ "ಓಂ" ಕಾರದ ನಿಜಸ್ವರೂಪದ ಅರಿವುಂಟಾಗು ತ್ತದೆ. ಇದರಲ್ಲಿಯೇ ಲೀನವಾಗುತ್ತಾ ಹೋದರೆ ಅತಿಮಾನಸ ಮತ್ತು ಪೂರ್ಣ ಸಮಾಧಿಯ ಸ್ಥಿತಿ ಪ್ರಾಪ್ತವಾಗಲು ಸಾಧ್ಯ. ಆಗ ಹಾಲುವರ್ಣದ ಅಮೃತ ಕಿರಣಗಳು ಬಂಗಾರ ವರ್ಣದ ಅಮೃತ ಕಿರಣಗಳಾಗುತ್ತವೆ.

ಸಾಧನೆ ಮಾಡುವಾಗ ಮೈಯೆಲ್ಲಾ ನೋವಾಗುತ್ತದೆ. ಮಂಡಾಲೆ (ಬ್ರಹ್ಮ ದೇಶ)ಯಲ್ಲಿ ನಾನು ಮೊದಲು ಈ ಸಾಧನೆಯನ್ನು ಪ್ರಾರಂಭಿಸಿದಾಗ ಪದ್ಮಾಸನದಲ್ಲಿ ಕುಳಿತುಕೊಂಡು ಪೂರ್ಣ ಒಂದು ದಿನ ಕೂಡ್ರುವುದು ಸಾಧ್ಯ ಆಗಲಿಲ್ಲಾ. ಹೀಗಾಗಿ ಮೊದಲಿನ ನನ್ನ ನಾಲ್ಕು ಪ್ರಯೋಗಗಳು ನಿಷ್ಪ್ರಯೋಜನವಾದವು. ಶ್ರೀ ನ ಗ ರ

[ಕಾಶ್ಮೀರ]ಕ್ಕೆ ಬಂದಾಗ ರಜೆಯ ದಿನಗಳಲ್ಲಿ ಶ್ರೀ ಶಂಕರಾಚಾರ್ಯ ಪರ್ವತವನ್ನೇರಿ ಶಂಕರಾಚಾರ್ಯ ಮಂದಿರಕ್ಕೆ ಹೋಗುತ್ತಿದ್ದೆ. ಅಲ್ಲಿ ಶ್ರೀ ಮತ್ ಶಾರದಾನಂದ ಭಾರತಿ ಎಂಬ ಸ್ವಾಮೀಜಿ ಬಂದಿದ್ದರು. ಅಖಿಲ ಭಾರತದ ತೀರ್ಥ ಪುಣ್ಯಕ್ಷೇತ್ರಗಳನ್ನು ಪಾದಯಾತ್ರೆಯಿಂದ ಮುಗಿಸಿ ಅಲ್ಲಿಗೆ ಬಂದವರಾಗಿದ್ದರು. ಮುಂದೆ ಅಮರನಾಥಕ್ಕೆ ಹೋಗಬೇಕೆಂಬುವ ವಿಚಾರ ಹೇಳುತ್ತಿದ್ದರು. ಅವರ ಸಂಗಡ ನಾನು ವೇದಾಂತದ ವಿಚಾರಗಳನ್ನು ಬಹಳ ಚರ್ಚಿಸುತ್ತಿದ್ದೆ. ಅವರು ಪ್ರೊಫೆಸರ್ [ಭಾರತದ ಮಾಜೀ ಅಧ್ಯಕ್ಷರು] ಎಸ್. ರಾಧಾಕೃಷ್ಣನ್‌ರು, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಬರೆದಿದ್ದ ಶ್ರೀಮತ್ ಭಗವದ್‌ಗೀತಾ, ಉಪನಿಷತ್ ಗ್ರಂಥಗಳಲ್ಲಿಯ ಉದಾಹರಣೆಗಳನ್ನು ಹೇಳುತ್ತಿದ್ದರು. ಶಿವಲಿಂಗ ತತ್ವಗಳ ವಿಷಯವಾಗಿ ನಾನು ಕಂಡ ಅನುಭವಗಳನ್ನು ಅವರ ಮುಂದೆ ಮನಸ್ಸು ಬಿಚ್ಚಿ ಮಾತಾಡುತ್ತಿದ್ದೆ. ಕಡೆಗೆ ಅವರು ಈ ಶಿವಲಿಂಗ ತತ್ವಗಳನ್ನು ಬಹಳವಾಗಿ ಮೆಚ್ಚಿಕೊಂಡರು. ಡಿಶೆಂಬರ್ ತಿಂಗಳಿನಲ್ಲಿ ಹಿಮಾಲಯ ಪರ್ವತ ತುಂಬಾ ಬೆಳ್ಳಗೆ ಬೆಣ್ಣೆ ಹಚ್ಚಿದಂತೆ ಭರ್ಫ ಬಿದ್ದಿತ್ತು. ಆ ದೃಶ್ಯವನ್ನು ಕಂಡು ಶಂಕರ ಮಂದಿರದಿಂದ ಮೂರು ಫರ್ಲಾಂಗ್ ಅಂತರದಲ್ಲಿ ಒಂದು ಅಕ್ರೋಡ ವೃಕ್ಷದ ಕೆಳಗೆ ಕುಳಿತುಕೊಂಡು ಆನಂದಭರಿತನಾಗಿ ಅಂಗೈಯಲ್ಲಿ ಲಿಂಗ ಧರಿಸಿಕೊಂಡು ಧ್ಯಾನಾಸಕ್ತನಾಗಿದ್ದೆ. ಮೂರು ದಿನಗಳವರೆಗೆ ನನಗೆ ಎಚ್ಚರ ಇದ್ದಿರಲಿಲ್ಲಾ. ಹಾಸ್ಪಿಟಲ್ ಶಿಪಾಯಿಗಳು ಹುಡುಕುತ್ತಾ ಬಂದಿದ್ದರು. ಆಗ ಸ್ವಾಮಿಗಳು ನನ್ನ ಸಮೀಪಕ್ಕೆ ಬಂದು ಎಚ್ಚರಿಸಿದರು. ನೀನು ಹೀಗೆ ಒಬ್ಬನೇ ಈ ಸ್ಥಿತಿಯಲ್ಲಿ ಕೂಡ್ರಲಿಕ್ಕೆ ಬಂದಿಲ್ಲಾ, ಸತ್ಯ ಧರ್ಮದ ವಿಷಯವಾಗಿ ನಿನ್ನಿಂದ ಒಂದು ಮಹತ್ವದ ಸೇವೆ ಸಲ್ಲಬೇಕಾಗಿದೆ. ಹೋಗು ಹಾಸ್ಪಿಟಲಿನಲ್ಲಿ ರೋಗಿಗಳ ಸೇವೆ ಮಾಡು, ಈ ಜಗತ್ತಿನಲ್ಲಿ ಅಧರ್ಮದ ರೋಗವೂ ಬಹಳ ಹಬ್ಬಿದೆ. ಮಾನವ ಧರ್ಮದ ಸೇವೆ ಮಾಡು ಎಂದು ಹೇಳಿದರು, ಹಾಸ್ಪಿಟಲ್‌ಗೆ ಮರಳಿ ಬಂದಾಗ ನಮ್ಮ ಕಮಾಂಡಿಂಗ್ ಆಫೀಸರರು ನನಗೆ ಮೂರು ದಿನಗಳವರೆಗೆ ಡ್ಯೂಟಿಯ ಮೇಲೆ ಬಾರದೇ ಇದ್ದುದಕ್ಕೆ ಮೂರುದಿನಗಳ ಪಗಾರ ಕಟ್ ಮಾಡಿದರು. ಈ ಧ್ಯಾನಾವಸ್ಥೆಯಲ್ಲಿ ನಾನು ಏನು ಅನುಭವಿಸಿದೆ ಎಂಬುವದನ್ನು ವರ್ಣಿಸುತ್ತ ಹೋದರೆ ಬಹಳವಾದೀತು. ಒಂದುಸಾರೆ ಅದರ ರುಚಿ ಹತ್ತಿದರೆ ಈ ಹೊರಗಿನ ಪ್ರಪಂಚದ ರುಚಿಗಳೆಲ್ಲಾ ಅಸಹ್ಯವಾಗಿ ಕಾಣಿಸುತ್ತವೆ.

ಸರ್ವಿಸಾ ಮುಗಿಸಿಕೊಂಡು ಹೊರಳಿಬಂದನಂತರ ಶಿವಲಿಂಗ ಪೂಜೆಯ ಸಾಧನೆಗಾಗಿ ಒಂದು ಸುಲಭವಾದ ಉಪಾಯವನ್ನು ಕಂಡುಕೊಂಡೆ, ಹುತ್ತದ ಇಲ್ಲವೆ ಎರಿಯ ಮಣ್ಣಿನಿಂದ ಒಂದು ದೊಡ್ಡ ಶಿವಲಿಂಗವನ್ನು ಮಾಡಿ ಆ ಶಿವಲಿಂಗದ ಮಧ್ಯದಲ್ಲಿ ನನ್ನ ಇಷ್ಟಲಿಂಗವನ್ನಿಟ್ಟು ಅದನ್ನು ಒಂದು ಸ್ಟೂಲ್‌ನ ಮೇಲಿಟ್ಟು ಅದಕ್ಕೆ ಹೊಂದಿಕೆಯಾಗುಹಂತೆ ಅದರ ಎದುರಿಗೇ ಒಂದು ವಿಶ್ರಾಂತಿ [ಆರಾಮ ಖುರ್ಚಿ] ಖುರ್ಚಿಯ ಮೇಲೆ

ಕುಳಿತುಕೊಂಡು ಲಿಂಗಪೂಜೆಯ ಸಾಧನೆಯನ್ನು ಮುಂದುವರಿಸಿದ್ದೇನೆ. ಈ ಸಾಧನೆ ಯು ಅವರವರ ಇಚ್ಛೆಯಂತೆ ಕೈಗೂಡಿರುವುದರ ವಿಷಯವಾಗಿ ನಾವು ಶಾಸ್ತ್ರ, ಪುರಾಣ, ಕೀರ್ತನಗಳಲ್ಲಿ ಅನೇಕ ಸತ್ಪುರುಷರ ಶಿವಯೋಗಿಗಳ ಪವಾಡಗಳ ಕಥೆಗಳನ್ನು ಕೇಳುತ್ತೇವೆ.

ಮಹಾ ಶಿವಶರಣೆ ಅಕ್ಕಮಹಾದೇವಿ ಕಲ್ಯಾಣದ ದಾರಿ ಹಿಡಿದಾಗ ಮಹಾತ್ಮ ಬಸವಣ್ಣನವರು ಈ ದೃಶ್ಯವನ್ನು ಲಿಂಗಪೂಜೆಯಲ್ಲಿ ಕಂಡರು. ಎಲ್ಲ ಶರಣರಿಗೆ ಕಲ್ಯಾಣ ನಗರವನ್ನು ಶೃಂಗರಿಸಿ ಸ್ವಾಗತಿಸಲಿಕ್ಕೆ ಅಪ್ಪಣೆ ಕೊಟ್ಟರು. ಅಥಣಿಯ ಶಿವಯೋಗಿಗಳು ತಮ್ಮ ಶಿವಯೋಗ ದೃಷ್ಟಿಬಲದಿಂದ ಮೋಡವನ್ನು ಚದುರಿಸಿದರು. ನೀರು ಸಹಿತ ತುಪ್ಪವಾಯಿತು. ಇದೇ ರೀತಿಯಾಗಿ ಜಗದ್ಗುರು ರೇಣುಕಾಚಾರ್ಯರ ಲೀಲೆ, ಹೇಮರೆಡ್ಡಿ ಮಲ್ಲಮ್ಮ, ಕಲಬುರ್ಗಿಯ ಶರಣಬಸವೇಶ್ವರರು, ಸೊಲ್ಲಾಪುರದ ಸಿದ್ಧರಾಮೇಶ್ವರರು, ನಿಜಗುಣ ಶಿವಯೋಗಿಗಳು, ಎಡೆಯೂರ ಸಿದ್ಧಲಿಂಗೇಶ್ವರರು, ಹಾನಗಲ್ ಕುಮಾರಸ್ವಾಮಿಗಳು, ತ್ರಿಕಾಲಜ್ಞಾನಿಗಳಾದ ಹಾವೇರಿ ಹುಕ್ಕೇರಿಮಠದ ಶಿವಬಸವ ಮಹಾಸ್ವಾಮಿಗಳು, ಬಂಕಾಪುರದ ಅರಳಿಮಠದ ರುದ್ರಮುನಿಸ್ವಾಮಿಗಳು ಇತ್ಯಾದಿ ಅನೇಕ ಶಿವಶರಣ ಶಿವಶರಣೆಯರಿಂದ ಉಂಟಾಗಿರುವ ಅನೇಕ ಸೋಜಿಗದ ಕಥೆಗಳನ್ನು ಪುರಾಣ, ಕೀರ್ತನೆಗಳಲ್ಲಿ ನಾವು ಭಕ್ತಿಯಿಂದ ಕೇಳುತ್ತೇವೆ ಅಲ್ಲವೇ ? ಇಂತಹ ಮಹಾ ಶಿವಶರಣ, ಶಿವಶರಣೆಯರ ತಪಶ್ಚರ್ಯದ ಫಲವಾಗಿ ಈ ಆಧುನಿಕ ವಿಜ್ಞಾನಮಯ ಜಗತ್ತಿನಲ್ಲಿಯೂ ಸಹ ತಲೆಯೆತ್ತಿ ಮೆರೆಯುವಂತಾಗಿದೆ ನಮ್ಮ ಈ ವೀರಶೈವ ಧರ್ಮ. ಪ್ರತಿಯೊಬ್ಬ ವೀರಶೈವನ ಮೇಲೆ ಸತ್ಯ ದೇವಮಾನವ ಧರ್ಮದ ವಿಷಯವಾಗಿ ಬಹಳ ದೊಡ್ಡ ಜವಾಬ್ದಾರಿ ಇದೆ. ಜಗತ್ತಿನಲ್ಲ ಈ ಧರ್ಮ ಬೆಳಗಿ ಮೊಳಗಬೇಕಾಗಿದೆ, ವಿಶ್ವಶಾಂತಿ ಸ್ಥಿರವಾಗಬೇಕಾಗಿದೆ. ನಮ್ಮ ನಮ್ಮಲ್ಲಿಯ ಭೇದ ಭಾವನೆಗಳನ್ನು ಮರೆತುಬಿಟ್ಟು ಒಂದಾಗಿ ಒಕ್ಕಟ್ಟಿನಿಂದಲೂ ತ್ಯಾಗದ ಬಲದಿಂದಲೂ ಈ ಧರ್ಮದ ಸೇವೆ ಮಾಡೋಣ, ನಮ್ಮ ಶರೀರದಲ್ಲಿ ಒಂದೊಂದು ಹನಿ ರಕ್ತ ಇರುವ ವರೆಗೂ ಈ ನಮ್ಮ ಧರ್ಮದ ರಕ್ಷಣೆ ಮಾಡೋಣ, ಇದೇ ನಮ್ಮ ಪ್ರತಿಜ್ಞೆಯಾಗಿರಲಿ "ಜಯ ಲಿಂಗಃ" ಎಂಬುವದೇ ನಮ್ಮ ರಾಷ್ಟ್ರಗೀತೆಯಾಗಿರಲಿ.

---

ಗಬೇಕು. ಕೇವಲ ಆಡಂಬರದ ಮೌನ ಪ್ರಯೋಜನವಿಲ್ಲ. ಕೇವಲ ಮೌನದಿಂದಿದ್ದು ಒಳಗೆ ಮದಮಾತ್ಸರ್ಯ, ವಿಷಯವಾಸನೆ ತುಂಬಿದ್ದರೆ ಏನು ಪ್ರಯೋಜನ? ಇದು ಸವಕಲು ನಾಣ್ಯದಂತೆ ಪೋಟು ಮರದಂತೆ ನಿರುಪಯೋಗಿಯಾಗುತ್ತದೆ ಕೊನಗೆ ಅಪಾಯಕ್ಕೆ ಕಾರಣವಾಗುತ್ತದೆ. ತನ್ನ ಕಾಂತಿ ಮತ್ತು ಸತ್ವವನ್ನು ಕಳೆದುಕೊಳ್ಳುತ್ತದೆ. ಅಂತಹ ಮೌನ ಕೇವಲ ಆಡಂಬರ ಅಥವಾ ತೋರಿಕೆಯದಾಗುತ್ತದೆ. ಡಂಬಾಚಾರದ ಮೌನವು ತನ್ನನ್ನು ತಾನೇ ನಷ್ಟಮಾಡಿಕೊಳ್ಳುತ್ತದೆ. ಅಲ್ಲದೆ ಬೇರೆಯವರನ್ನು ತೊಂದರೆಗೆ ಗುರಿಪಡಿಸುತ್ತದೆ. ಅದ್ದರಿಂದ ಮಾತು ಜ್ಯೋತಿರ್ಲಿಂಗವಾಗಿ ಅದು ಸರ್ವೋತ್ಕೃಷ್ಟವಾದಾಗ ಮಾತ್ರ ಆ ಮೌನ ಸಾರ್ಥಕವಾದೀತು.

# ಬಸವ ಪ್ರತಿಜ್ಞಾ

—ಟಿ. ಎಸ್. ಮಹಾದೇವಯ್ಯ

ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿವ್ಯ ಕೂಡಲ ಸಂಗಮದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರೀ ಬೊಮ್ಮಣ್ಣನೇ ಸಾಕ್ಷಿ.

ಮನುಷ್ಯನು ತಾನು ಹುಟ್ಟಿದಾಗಿನಿಂದಲೂ ಕ್ಷಣಕ್ಷಣಕ್ಕೂ ನಿಮಿಷ ನಿಮಿಷಕ್ಕೂ ಕೋಟ್ಯಾನುಕೋಟಿ ತಪ್ಪುಗಳನ್ನು ಮಾಡುತ್ತಾನೆ. ಒಂದು ತಪ್ಪು ಇಲ್ಲದೆ ಬೆಳೆಯುವುದು ಅಸಂಭವ. ತಪ್ಪು ಮಾಡಿದವನು ಮಾಡಿದ್ದು ತಪ್ಪೆಂದು ಒಪ್ಪಿಕೊಳ್ಳುವುದು ಅವನ ಒಂದು ಶ್ರೇಷ್ಠತರವಾದ ಗುಣವನ್ನು ತೋರುತ್ತದೆ. ಮನುಷ್ಯನು ತನ್ನಲ್ಲಿರುವ ವಿವೇಚನಾಶಕ್ತಿಯಿಂದ ಮಾಡಿದ ಕೆಲಸಗಳನ್ನೆಲ್ಲಾ ಚೆನ್ನಾಗಿ ವಿಮರ್ಶಿಸಿ ತಪ್ಪುಗಳನ್ನು ತಿದ್ದಿಕೊಳ್ಳುವುದು ಅವನ ಜೀವದ ಒಂದು ಹಿರಿದಾದ ಗುಣವನ್ನೇ ತೋರಿಸುತ್ತದೆ. ಆದಕ್ಕಾಗಿಯೇ ಮಹಾತ್ಮ ಗಾಂಧೀಜಿಯವರು ಈ ರೀತಿ ಅಂದಿರುವರು. "ತನ್ನ ಅಯೋಗ್ಯತೆಯನ್ನು, ಅಶಕ್ತತೆಯನ್ನು ಒಪ್ಪಿಕೊಳ್ಳುವುದು ಪ್ರಾರ್ಥನೆ". ವ್ಯವಹಾರದಲ್ಲಿ ಆದಷ್ಟು ಎಚ್ಚರಿಕೆಯಿಂದಿರಲು ವಿಮರ್ಶಾತ್ಮಕ ದೃಷ್ಟಿಯಿಂದ ತನ್ನ ಜೀವನವನ್ನು ವಿಮರ್ಶಿಸಿ ಇನ್ನು ಮುಂದೆ ತಪ್ಪು ಮಾಡದಂತೆ ನೋಡಿಕೊಂಡು ಸುಗುಣಗಳ ಖನಿಯಾಗಿ ಗಳಿಗೆಗಳಿಗೆಗಳಲ್ಲೂ ಮುಂದುವರಿಯುತ್ತಿರುವ ವ್ಯಕ್ತಿಯು ಮಹಾಪುರುಷರಲ್ಲಿ ಸೇರುತ್ತಾನೆ. ಕೆಲ ಜನರು ತಮ್ಮಲ್ಲಿರುವ ಕೆಟ್ಟ ಗುಣಗಳಿಗೆ, ಮುಸುಗುಮುಚ್ಚಿ ಆಡಂಬರದ ಸೋಗಿನಿಂದ ಜನರೆದುರಿಗೆ ನಿಲ್ಲುತ್ತಾರೆ. ಅಂಥವರು ಎಂದೂ ಮಹಾಪುರುಷರಾಗಿಲ್ಲ. ಆಗುವುದೂ ಇಲ್ಲ. ತಪ್ಪು ಮಾಡದಂತೆ ಎಚ್ಚರಿಕೆಯಾಗುವುದೂ ಇಲ್ಲ. ಅಕಸ್ಮಾತ್ತಾಗಿ ತಮ್ಮಿಂದ ಏನಾದರೂ ಸಂಭವಿಸಿದಲ್ಲಿ ಅದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟು ಕಣ್ಣೀರು ಸುರಿಸಿ ಗೋಳಿಡುತ್ತಾರೆ. ಪ್ರಾಯಶ್ಚಿತ್ತ ಮಾಡಿಕೊಂಡು ಪರಿಶುದ್ಧರಾಗುತ್ತಾರೆ. ತಪ್ಪನ್ನು ಒಪ್ಪಿಕೊಳ್ಳದ ದುರಾಗ್ರಹದ ಚಿಹ್ನೆಗಳೂ ಅವರಲ್ಲಿ ಕಂಡುಬರುವುದಿಲ್ಲ. ಇಂಥ ನೂರಾರು ನಿದರ್ಶನಗಳನ್ನು ನಾವು ಇಂದು ಮಹಾತ್ಮರ ಜೀವನದಲ್ಲಿ ನೋಡಬಲ್ಲೆವು. ಅವರು ನುಡಿದಿರುವ ಈ ಮಾತುಗಳನ್ನು ನೋಡಿರಿ. "ಪ್ರಾರ್ಥನೆಯೆಂದರೆ ಅದು ಬೇಡಿಕೆಯಲ್ಲ, ಆತ್ಮನ ಉತ್ಕಟೇಚ್ಛೆ. ಅದು ಪ್ರತಿದಿವಸದ ಕುಂದುಕೊರತೆಗಳನ್ನು ಒಪ್ಪಿಕೊಳ್ಳುವಿಕೆ. ಅದು ತನ್ನ ಕರ್ತನೊಡನೆ ಒಂದಾಗಲು ಹಂಬಲಿಸುವ ಬಲವತ್ತರೇಚ್ಛೆ. ಅದು ಆತನ ಆಶೀರ್ವಾದ ಪಡೆಯುವ ಮುಖವು ಎಂದಿರುವರು. ಈ ವಚನವೂ ಬಸವೇಶ್ವರನ ಇದೇ ವಿಧವಾದ ಪ್ರಾರ್ಥನಾಭಾವವನ್ನು ಪ್ರತಿಜ್ಞಾರೂಪದಲ್ಲಿ ಹೊರಗೆಡವಿರುತ್ತದೆ. ತನ್ನ ತಪ್ಪುಗಳನ್ನು

ಸಾಕ್ಷಾತ್ಕಾರವಾಗಲಾರದು. ಇದನ್ನು ಕುರಿತು ಶ್ರೀ ಸ್ವಾಮಿ ವಿವೇಕಾನಂದರು ಇಂತೆಂದು ನುಡಿದಿರುವರು. "Purity is absolutely the basic work, the bed rock upon which the whole Bhakthi building rest$." ಪರಿಶುದ್ಧತೆಯು ಅತ್ಯವಶ್ಯವಾದ ಮೂಲಕೃತಿ. ಭಕ್ತಿ ಮಂದಿರದ ತಳ ಹದಿಯ ಕಲ್ಲು–ಎಂಬುದೇ ಇದರ ಭಾವ. ಯಾವನು ತನ್ನ ಹೃದಯವನ್ನು ಸರಳಭಾವ ದಿಂದ ಪೂರ್ಣವಾಗಿ ತೆರೆದಿಟ್ಟು ಪರಮಾತ್ಮನಲ್ಲಿ ಮರೆಹೋಗುವನೋ ಆತನನ್ನು ಪರ ಮಾತ್ಮನು ಕರುಣಿಸುತ್ತಾನೆ. ಹಾಗೆ ಮಾಡದೆ ಕುಹಕಾಡಂಬರಗಳ ಜೀವನವನ್ನು ಮಹತ್ವದ್ದನ್ನಾಗಿ ಮಾಡಬೇಕೆಂದು ಪ್ರಯತ್ನಿಸುವವರು ಸ್ವಾಮಿ ರಾಮತೀರ್ಥರು. ಹೇಳುವಂತೆ "ಈಶ್ವರನ ಕಣ್ಣೊಳಗೆ ಮಣ್ಣು ಚೆಲ್ಲಲಿಕ್ಕೆ ಪ್ರಯತ್ನ ಮಾಡುವವರು ಸ್ವತಃ ಕುರುಡಾಗಿರುತ್ತಾರೆಂದು ತಿಳಿಯತಕ್ಕದ್ದು"–ಎಂದು ನಾವಾದರೂ ಭಾವಿಸ ಬೇಕು. ಮಹಾ ಪುರುಷರೆಲ್ಲರೂ ಆತ್ಮಪರಿಶುದ್ಧಿಗೆ ಹಾತೊರೆಯುವರು, ಕ್ಷಣಕ್ಷಣಕ್ಕೂ ತಮ್ಮ ಜೀವನವನ್ನು ವಿಮರ್ಶಿಸುವರು. ಮಾಡಿದ ತಪ್ಪಿಗಾಗಿ ನುರುಗುವರು. ಇದನ್ನೇ ಯೇಸುಕ್ರಿಸ್ತನು ಇಂತೆಂದಿರುವನು. "Repent for the kingdom of heaven is at hand". ಪಶ್ಚಾತ್ತಾಪಪಡು, ಏಕೆಂದರೆ ದೇವರಾಜ್ಯವು ನಿನ್ನ ಬಳಿಯಲ್ಲಿದೆ–ಎಂಬುದೇ ಅದರರ್ಥ. ಪರಮಾತ್ಮನ ನಿಜವಾದ ಆಕಾರವನ್ನು ತಿಳಿಯ ಲಿಚ್ಛಿಸುವನೂ, ಅಂಗವಿಕಾರಗಳನ್ನು ಲಿಂಗವಿಕಾರಗಳನ್ನಾಗಿ ಮಾಡಿ ಅನಿಷ್ಟ ಸ್ಥಳಗಳ ಲ್ಲೆಲ್ಲಾ ಶ್ರೇಷ್ಠ ಇಷ್ಟಗಳ ಪ್ರತಿಷ್ಠೆ ಮಾಡಿ ಜೀವಪರಮರ ಐಕ್ಯತೆಯ ಆನಂದದ ಕಡ ಲಲ್ಲಿ ಜಲಕ್ರೀಡೆಯಾಡಲು ಇಚ್ಛಿಸುವ ಭಕ್ತನೂ, ಈ ರೀತಿಯಲ್ಲಿ ಸರಳತನದಿಂದ, ಎಳೆ ಕಂದನಂತೆ ತನ್ನ ಹೃದಯದ ಆರ್ತತೆಯನ್ನು ಹೊರಗೆಡವುತ್ತಾನೆ ಗುರಿಯನ್ನು ಸೇರಲು ಜೀವನಗೊಂದು ಅವಸ್ಥೆಯ ಅನುಭವ. ಇದನ್ನು ಅರವಿಂದ ಘೋಷರು ಹೇಳುವಂತೆ "He (God) seek$ and enjoys mains blindness like the hands of a little child that group after its mother". ದೇವರು ಮನುಷ್ಯನ ಈ ವರ್ತನೆಯನ್ನು ಕತ್ತಲಲ್ಲಿ ತಾಯಿಗಾಗಿ ಕೈಚಾಚಿ ಹುಡುಕುವ ಕಂದನಂತೆ ಅನುಭವಿಸುತ್ತಾನೆ. ಇದರಿಂದ ಬಸವೇಶ್ವರರ ಹೃದಯದ ಭಾವನೆಯು ವ್ಯಕ್ತವಾಗುತ್ತದೆ. ತಪ್ಪು ಒಪ್ಪಿಕೊಳ್ಳುವ ಸರಳತನ, ಅದನ್ನು ತಿದ್ದಿಕೊಳ್ಳುವಿಕೆ; ಇವೆಲ್ಲಕ್ಕಿಂತಲೂ ಮತ್ತೆ ತಪ್ಪು ಮಾಡದಂತೆ ಪರಮಾತ್ಮನ ಸಾಕ್ಷಿಯಾಗಿ ಆಣೆಮಾಡುವ ಹೃದಯದ ಸ್ಥಿತಿಗಳು ಈ ವಚನದಲ್ಲಿ ಚೆನ್ನಾಗಿ ಕಂಡುಬರುತ್ತವೆ. ಇದು ಮಹಾ ಪುರುಷರ ಜೀವನದ ಒಂದು ಹಿರಿದಾದ ಗುಣ! ಜೀವನು ದೇವರನ್ನರಸುವ ಮಾರ್ಗ ವಿದು! "ಎಲೈ ಪರಮಾತ್ಮನೇ ನಾನು ನನ್ನ ಜೀವನದಲ್ಲಿ ಅನಂತಕೋಟಿ ತಪ್ಪು ಗಳನ್ನು ಮಾಡಿರುತ್ತೇನೆ. ನೀನು ಬಹಳವಾಗಿ ಸೈರಿಸಿರುವೆ, ಇನ್ನು ಕಿನ್ನರೀ ಬೊಮ್ಮ ಣ್ಣನ ಸಾಕ್ಷಿಯಾಗಿ ತಪ್ಪು ಮಾಡುವುದಿಲ್ಲ."

# ಗ್ರಾಮಾಂತರ ಬಸವ ಜಯಂತಿ

ಸಿದ್ಧರಬೆಟ್ಟ, ಸಿದ್ಧರು ನೆಲೆನಿಂತ ಕ್ಷೇತ್ರ, ಅವಿಮುಕ್ತ ತಾಣ, ಪುಣ್ಯ ಭೂಮಿ, ದಿವ್ಯ ವನಸ್ಪತಿಗಳ ಬಿಂದು, ಆರೋಗ್ಯಧಾಮ, ಪ್ರಕೃತಿಯ ಪುಣ್ಯಧಾಮ, ಅನೇಕ ಪುಣ್ಯ ನದಿಗಳ ಉಗಮಸ್ಥಾನ, ಭಕ್ತರ ಭಕ್ತಿಯ ಬೀಡು, ಕೃಷಿಕರ ತೌರುಭೂಮಿ, ಜ್ಞಾನ ಧರ್ಮಗಳ ಮಂಗಳ ಕ್ಷೇತ್ರ. ಸಿದ್ಧೇಶ್ವರರ ತಪೋ ಭೂಮಿ, ಶರಣ ಪರಂಪರೆಯ ಪುಣ್ಯವಾಹಿನಿಯಲ್ಲಿ ಎದ್ದುನಿಂತ ಶ್ರೀಗಿರಿ. ಕಣ್ಮನಗಳನ್ನು ಏಕಕಾಲದಲ್ಲಿ ತೃಪ್ತಿ ತುತ್ತಿನಿಂದ ತುಂಬುವ ಪರಿಣಾಮ ರಮಣೀಯಕ ಕ್ಷೇತ್ರ. ಕವಿ, ಕಲಾವಿದರಿಂದ ಕೀರ್ತಿತಗೊಂಡ ದಿವ್ಯ ಕ್ಷೇತ್ರ. ಅಂಥ ಪುಣ್ಯ ನೆಲದಲ್ಲಿ ಬಸವ ಜಯಂತಿಯ ಆಚರಣೆ ತಾ|| 1–2–85 ರಂದು ಶುಕ್ರವಾರ.

ನೂತನ ದೇವಾಲಯದ ಪ್ರಾರಂಭೋತ್ಸವ ಅದರ ಸಂಭ್ರಮ ಸಡಗರದ ಉತ್ಸವ. ಬಣ್ಣಬಣ್ಣದ ಭಕ್ತರ ಗುಂಪು, ವಾದ್ಯ ವೈಭವ, ನಂದೀಧ್ವಜ ನರ್ತನ, ಕೋಲಾಟ, ಭಜನೆ ತಂಡಗಳಿಂದ ನೃತ್ಯ, ಉತ್ಸಾಹದ ಉಕ್ಕುವ ಪ್ರವಾಹ, ಜನ ಸಾಗರ, ಕಾಡೆಲ್ಲ ಜೀವ ತಳೆದಂತೆ ಅನುಭವ. ಪರಮ ಪೂಜ್ಯ ಶ್ರೀ ಶ್ರೀಗಳವರ ಆಗಮನ. ಶ್ರದ್ಧಾಭಕ್ತಿಯ ಸ್ವಾಗತ, ವೇದಿಕೆಯ ತುಂಬಾ ಹರಗುರು ಚರಮೂರ್ತಿಗಳ, ಗಣ್ಯರ ಸಮಾವೇಶ, ಕಣ್ಣಿಹಬ್ಬ ಭಾವುಕ ಮನಕ್ಕೆ ಒಂದು ಹೊಸ ಲೋಕದ ದರ್ಶನ. ಅದೆಲ್ಲಕ್ಕೆ ಕಳಶವಿಟ್ಟಂತೆ ಪೂಜ್ಯ ಶ್ರೀ ಶ್ರೀಗಳವರ ಅಧ್ಯಕ್ಷತೆ.

ಪ್ರಾರ್ಥನೆಯೊಂದಿಗೆ ಕಾರ್ಯಕ್ರಮದ ಆರಂಭ, ವ್ಯವಸ್ಥಾಪಕರಿಂದ ಸ್ವಾಗತ, ಗಣ್ಯರಿಂದ ಬಸವಣ್ಣನವರ ವಿವಿಧ ಮುಖಗಳ ಸೇವಾ ಪರಿಚಯ ಮುಖ್ಯವಾಗಿ ಮಾತನಾಡಿದವರು ಶಾಸಕರಾದ ಶ್ರೀ ಜಿ. ಎಸ್. ಶಿವನಂಜಪ್ಪನವರು ಮತ್ತು ಶ್ರೀ ಭಾಸ್ಕರಪ್ಪನವರು ಶ್ರೀ ಲಿಂಗರಾಜು ಅವರಿಂದ ವಚನ ಗಾಯನ.

ಗುಡಿ ಗುಂಡಾರಗಳಲ್ಲಿದ್ದ, ಗವಿ ಗಹ್ವರಗಳಲ್ಲಿದ್ದ, ಪುರೋಹಿತರ ಹಿಡಿತದಲ್ಲಿದ್ದ, ಶ್ರೀಮಂತರ ಆಡಳಿತದಲ್ಲಿದ್ದ, ಉಚ್ಚವರ್ಣದವರ ಸೊತ್ತಾಗಿದ್ದ, ದೇವರನ್ನು ದೀನ ದಲಿತರ, ಬಡವರ, ಸ್ತ್ರೀಯರ ಎಲ್ಲರ ಸೊತ್ತಾಗುವಂತಹ ಜಗತ್ತು ಎಂದೆಂದಿಗೂ ಸ್ಮರಿಸುವಂಥ ಕ್ರಾಂತಿಯನ್ನು ಬಸವಣ್ಣ ಮಾಡಿಹೋದ. 'ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಣ್ಣ'–ಎಂದು ಹೆಸರಾದ ಎಂಬುದಾಗಿ ಜನಪದರ ಹಾಡುಗಳಲ್ಲಿ ಮೂಡಿಬಂದ ಬಸವಣ್ಣನ ನಿರ್ಮಲ ಮೂರ್ತಿಯ ಪರಿಚಯ ಮಾಡಿಸಿದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ಭಗವಾನ್ ಬಸವೇಶ್ವರರ ಅವತಾರವಾದದ್ದು ಜಗತ್ತನ್ನು ಕ್ರಿಯಾಶೀಲವನ್ನಾಗಿಸಲು. ಮೌಢ್ಯಗಳ ಹೆಪ್ಪುಗಟ್ಟಿದ್ದ ಧರ್ಮಭೂಮಿಯನ್ನು ಉತ್ತುಬಿತ್ತಿ ಬೆಳೆಯನ್ನು

ತೆಗೆಯುವುದಕ್ಕೋಸ್ಕರ. [illegible] ಮನುಷ್ಯ ದುಡಿದು, ಅನ್ಯಾಯ, ಅನೀತಿಗಳನ್ನು ದೂರವಿರಿಸಿ ಬಾಳುವುದರಿಂದ ಎಂಬುದನ್ನು ಬಸವಣ್ಣನವರ ಬದುಕಿನಿಂದ ತಿಳಿಯಬಹುದು. ಪೂಜೆ ಮಾಡುವ ನಿಷ್ಠೆ ಬೆಳೆದಂತೆ ಕಾಯಕ ಮಾಡುವ ನಿಷ್ಠೆಯೂ ಬೆಳೆಯಬೇಕು. ಪ್ರವಚನ ಪ್ರವೀಣರಾದಂತೆ ಪರಿಶ್ರಮ ನಿಷ್ಠೆಯೂ ಹೆಚ್ಚಬೇಕು. ಬಸವಣ್ಣನವರು ದೂರದೃಷ್ಟಿಯುಳ್ಳವರು, ಆಲೋಚನಾಪರರು, ಪ್ರಾಮಾಣಿಕ ಜೀವನಕ್ಕೆ ತೆರೆದ ಪುಸ್ತಕ ಅವರ ಬದುಕು. ಹರಿಜನರ ಬಗ್ಗೆ ಅವರ ಹಾಗೆ ಮನಮರುಗಿ, ಉದ್ಧಾರಕ್ಕೆ ಕೈಹಚ್ಚಿದವರಿಲ್ಲ. ಎಂಟು ನೂರು ವರ್ಷಗಳ ಹಿಂದೆ ನಿರ್ಭೀತಿಯಿಂದ, ನಿರ್ಭೀಡೆಯಿಂದ ಅವರೊಂದಿಗೆ ಬೆರೆತು ಬಾಳಿದರು; ಅವರಲ್ಲಿದ್ದ ಲೋಪದೋಷಗಳನ್ನು ತಿದ್ದಿದರು, ಸಂಸ್ಕಾರ ನೀಡಿದರು, ಶುದ್ಧಗೊಳಿಸಿದರು, ಎಲ್ಲರೂ ಒಪ್ಪುವಂತೆ ಕೈಹಿಡಿದು ಕರೆತಂದರು, ಎಲ್ಲರಿಂದ ಗೌರವ ದಕ್ಕುವಂತೆ ನೋಡಿಕೊಂಡರು ಸ್ತ್ರೀಯರ ಏಳ್ಗೆಯಲ್ಲಿ ಅವರು ವಹಿಸಿದ ಪಾತ್ರ ಅವಿಸ್ಮರಣೀಯ. ಅವರಿಗೆ ಸಮಾನತೆಯನ್ನು ತಂದುಕೊಟ್ಟರು, ಶಿಕ್ಷಣಾಲಯಗಳನ್ನು ಸ್ಥಾಪಿಸಿದರು. ಆತ್ಮೋನ್ನತಿಗೆ ಹಾದಿಹಾಕಿದರು, ವಿಚಾರದ ಮಹಾ ಮೇರು ಬಸವಣ್ಣನವರು ಮಾನವತಾ ಮಹಾನುಭಾವ ಆ ಪುಣ್ಯಮೂರ್ತಿ, ಅವರಿಂದ ಪ್ರಾರಂಭಗೊಂಡ ಶರಣ ಪರಂಪರೆ ಬೆಳೆದು ಸಿದ್ಧರ ಬೆಟ್ಟದ ಪುಣ್ಯಭೂಮಿಯಲ್ಲಿ ನಳನಳಿಸಿದೆ, ಅವರ ದಿವ್ಯ ಸಂದೇಶ ಸಾರುತ್ತಿದೆ. ಅದಕ್ಕೆ ಇಂದು ಸಮಾವೇಶಗೊಂಡಿರುವ ಈ ಬೃಹತ್ ಸಭೆಯೇ ನಿದರ್ಶನ ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದಿಂದ ಅಪ್ಪಣೆ ಕೊಡಿಸಿದರು.

ರಾತ್ರಿ ಹತ್ತು ಘಂಟೆಗೆ ಜಗಜ್ಜ್ಯೋತಿ ಬಸವೇಶ್ವರ ನಾಟಕ ಪ್ರಾರಂಭವಾಯಿತು ಶ್ರೀಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ. ಬೆಟ್ಟದ ತುಂಬಾ ಜನ, ಮರ, ಗಿಡ ಕಾಣದಷ್ಟು ಜನ, ಮರವಾಗಿ ತೋರಿದರು ನಾಟಕವನ್ನು, ಮರ ಮಟ್ಟು ಗಿಡವಾಗಿ ಆಲಿಸಿದರು ನಾಟಕದ ಹಾಡುಗಳನ್ನು, ಮಾತುಗಳನ್ನು, ಗಿಡದಂತೆ ನಲಿದರು, ಹೂವಾಗಿ ಅರಳಿದರು ತೃಪ್ತಿಯಿಂದ. "ಚೆನ್ನಾಗಿ ಒಪ್ಪಿದೆ ಪಾರ್ಟು, ಹಾಡುಗಾರಿಕೆಯೂ ಚೆನ್ನಾಗಿದೆ" ಎಂದು ಬಸವಣ್ಣನ ಪಾತ್ರವನ್ನು ಕಂಡು ಪಕ್ಕದಲ್ಲಿ ಕುಳಿತು ನಾಟಕ ನೋಡುತ್ತಿದ್ದ ಸೂಲೇನಹಳ್ಳಿಯ ಮಿತ್ರರೊಬ್ಬರು ಹೇಳುತ್ತಿದ್ದರು. "ಮಠ ಪೂಜಾರಿಯನ್ನು ಎಲ್ಲಿ ಹಿಡಿದುತಂದರು ಸ್ವಾಮಿಗಳು, ಎಷ್ಟು ಚೆನ್ನಾಗಿ ಮಾಡುತ್ತಾನೆ" ಎನ್ನುತ್ತಿದ್ದರು ಇನ್ನೊಬ್ಬರು. "ಹಾರ್ಮೋನಿಯಂ ಮಾಸ್ಟರ್ ಯಾವೂರವರಂತೆ? ಎಷ್ಟು ಚೆನ್ನಾಗಿ ಬಾರಿಸುತ್ತಾರೆ" ಎಂದವರು ಮತ್ತೊಬ್ಬರು. ಎಲ್ಲವನ್ನೂ ಕೇಳಿಸಿಕೊಂಡ ವರದಿಗಾರ ಸುಮ್ಮನೆ ಒಳನಗುತ್ತಿದ್ದ; ಸ್ವಾಮೀಜಿಯವರ ಕಡೆ ನೋಡುತ್ತ. ನಾಟಕ ಮುಗಿದಾಗ ಸೂರ್ಯೋದಯವಾಗಿತ್ತು.

# ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ.,

ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-೧

## ಠೇವಣಾತಿ ಯೋಜನೆಗಳು ಮತ್ತು ಬಡ್ಡಿ ದರಗಳು:

**ಉಳಿತಾಯ ಖಾತೆ:**

### ಉಳಿತಾಯವೇ ಆಪದ್ಧನ

ಈ ಖಾತೆಯನ್ನು ರೂ. 5-00 ಗಳಿಂದ ಆರಂಭಿಸಬಹುದು. ನಿಮ್ಮ ಹೆಸರಿಗೆ ಬಂದ ಚೆಕ್ಕುಗಳನ್ನು ನಾವು ಪಡೆದು ವಸೂಲಿಗೆ ಕಳುಹಿಸಿಕೊಡುವೆವು. ನೀವು ಖಾತೆಯಲ್ಲಿಡುವ ಮೊಬಲಗಿಗೆ ಆ ತಿಂಗಳ ಕನಿಷ್ಠ ಶಿಲ್ಕಿನ ಮೇಲೆ ಬಡ್ಡಿಯನ್ನು ಕೊಡಲಾಗುವುದು. ಅವಶ್ಯಕತೆ ಬಂದಾಗ ಹಣವನ್ನು ಪಡೆಯಬಹುದು. ನಿಮ್ಮ ಖಾತೆಯಲ್ಲಿ ಕನಿಷ್ಠ ಶಿಲ್ಕು ರೂ. 100-00 ಇದ್ದರೆ ನಿಮಗೊಂದು ಚೆಕ್ ಪುಸ್ತಕ ಉಪಯೋಗಿಸಲು ಅವಕಾಶವಿದೆ. ಶೇಕಡ 6 ರಂತೆ ಬಡ್ಡಿಯನ್ನು ನೀವಿಟ್ಟ ಕನಿಷ್ಠ ಶಿಲ್ಕು ತಿಂಗಳು ಮೊಬಲಗಿನ ಮೇಲೆ ಕೊಡುತ್ತೇವೆ.

**ಚಾಲ್ತಿ ಖಾತೆ:**

ಈ ಖಾತೆಯನ್ನು ರೂ. 100-00 ಗಳ ಮೇಲ್ಪಟ್ಟು ಆರಂಭಿಸಬಹುದು. ಶೇಕಡ ½ ರಂತೆ ಬಡ್ಡಿಯನ್ನು ಕನಿಷ್ಠ ತಿಂಗಳ ಶಿಲ್ಕು ಮೇಲೆ ಕೊಡಲಾಗುವುದು.

### ಮಾಯಿದೆ ಠೇವಣಾತಿಗಳು

ಠೇವಣಾತಿಗಳ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 15 ದಿವಸದಿಂದ | 45 ದಿವಸಗಳವರೆಗೆ | ಶೇ. | 4 |
| 46 ದಿವಸದಿಂದ | 90 ದಿವಸಗಳವರೆಗೆ | ಶೇ. | 5 |
| 91 ದಿವಸದಿಂದ | 6 ತಿಂಗಳ ಒಳಗೆ | ಶೇ. | 6 |
| 6 ತಿಂಗಳಿಂದ | 9 ತಿಂಗಳ ಒಳಗೆ | ಶೇ. | 7 |
| 9 ತಿಂಗಳಿಂದ | 1 ವರ್ಷದ ಒಳಗೆ | ಶೇ. | 8 |
| 1 ವರ್ಷದಿಂದ | 2 ವರ್ಷಗಳು | ಶೇ. | 9 |
| 2 ವರ್ಷ ಮೇಲ್ಪಟ್ಟು | 3 ವರ್ಷಗಳ ಒಳಗೆ | ಶೇ. | 10 |
| 3 ವರ್ಷ ಮೇಲ್ಪಟ್ಟು | 5 ವರ್ಷಗಳ ಒಳಗೆ | ಶೇ. | 11 |
| 5 ವರ್ಷ ಮೇಲ್ಪಟ್ಟು | .... .... .... | ಶೇ. | 12 |

# ಯಜಮಾನ್ ಕೆಂಚಪ್ಪನವರು

—ಶ್ರೀಮತಿ ನೀಲಾಂಬಿಕೆ ಮಲ್ಲಿಕಾರ್ಜುನಯ್ಯ,
ನಂ. 120/3, 4 ನೇ ಕ್ರಾಸ್, ಗಾಂಧೀನಗರ, ಬೆಂಗಳೂರು. – 560009.



ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ ಹಾಗೂ ಸಮಾಜ ಸೇವಕರೂ ಆಗಿದ್ದ ಯಜಮಾನ್ ಕೆಂಚಪ್ಪನವರು ಕಳೆದ ಫೆಬ್ರವರಿ ಹದಿನಾಲ್ಕರಂದು ಶಿವೈಕ್ಯರಾದರು. ಅವರಿಗೆ ಎಂಬತ್ತಾರು ವರ್ಷ ವಯಸ್ಸಾಗಿತ್ತು. ಶ್ರೇಷ್ಠ ವರ್ತಕರೂ ಆಗಿದ್ದ ಕೆಂಚಪ್ಪನವರು ಗುರು ಸೇವಕರು, ದೇಶ ಪ್ರೇಮಿಗಳು, ವಿದ್ಯಾಪ್ರೇಮಿಗಳೂ ಆಗಿದ್ದರು.

ಕೋಲಾರದ ಯಜಮಾನ್ ಶ್ರೀ ಭೋಗಪ್ಪ ಮತ್ತು ಶ್ರೀಮತಿ ಮರುಳಸಿದ್ದಮ್ಮನವರ ಜ್ಯೇಷ್ಠ ಪುತ್ರರಾಗಿದ್ದ ಯಜಮಾನ್ ಕೆಂಚಪ್ಪನವರು ಎಳೆತನದಲ್ಲೇ ಕೋಲಾರವನ್ನು ಬಿಟ್ಟು ಬೆಂಗಳೂರಿಗೆ ಬಂದು ಸುಗಂಧ ದ್ರವ್ಯಗಳ ವ್ಯಾಪಾರವನ್ನು ಪ್ರಾರಂಭಿಸಿ ಪ್ರಗತಿಗೆ ಬಂದರು.

1942ರಿಂದ 47ರವರೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಾಂಗ್ರೆಸ್ಸಿನ ನಿಷ್ಠಾವಂತ ಕಾರ್ಯಕರ್ತರಾಗಿ ಸೇವೆಸಲ್ಲಿಸಿ ಜನಪ್ರಿಯರಾಗಿದ್ದರು. ರಾಜ್ಯದ ಮಾಜಿ ಮುಖ್ಯಮಂತ್ರಿ ಸಿದ್ದವನಹಳ್ಳಿ ನಿಜಲಿಂಗಪ್ಪನವರ ನೇತೃತ್ವದಲ್ಲಿ ರೂಪುಗೊಂಡಿದ್ದ ಕರ್ನಾಟಕ ಏಕೀಕರಣ ಸಮಿತಿಯ ಕೋಶಾಧ್ಯಕ್ಷರಾಗಿಯೂ ಅವರು ಕಾರ್ಯ ನಿರ್ವಹಿಸಿದ್ದರು.

ದೇಶಪ್ರೇಮಿಗಳಲ್ಲದೆ ವಿದ್ಯಾಪ್ರೇಮಿಗಳೂ ಆಗಿದ್ದ ಅವರು ರಾಷ್ಟ್ರೀಯ ವಿದ್ಯಾಲಯ ಸಂಸ್ಥೆಯ ಸ್ಥಾಪಕ ಸದಸ್ಯರೂ ಆಗಿದ್ದರು. ಅಲ್ಲದೆ ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆಯ ಅಧ್ಯಕ್ಷರಾಗಿ ಅನೇಕ ವರ್ಷ ಸೇವೆ ಸಲ್ಲಿಸಿದ್ದಾರಲ್ಲದೆ ಕೊನೆಯುಸಿರೆಳೆಯುವವರೆಗೂ ಉಪಾಧ್ಯಕ್ಷರಾಗಿದ್ದರು.

ಯಜಮಾನ್ ಕೆಂಚಪ್ಪನವರು ನೇತ್ರದಾನಿ ಡಾ|| ಎಂ. ಸಿ. ಮೋದಿಯವರ ನಿಕಟವರ್ತಿಗಳಾಗಿದ್ದರಲ್ಲದೆ, ಬೆಂಗಳೂರಿನಲ್ಲಿ ಈಚಿನವರೆಗೆ ನಡೆಸಿದ ಎಲ್ಲಾ ನೇತ್ರದಾನ ಶಿಬಿರಗಳಲ್ಲಿ ಮುಂದೆ ನಿಂತು ಮಾಡಿದ ಸೇವಾಕಾರ್ಯ ಸ್ತುತ್ಯಾರ್ಹವಾದುದು.

ಅವರ ಸೇವಾ ಕಾರ್ಯವನ್ನು ಮೆಚ್ಚಿ ಬೆಂಗಳೂರಿನ ಲಯನ್ಸ್ ಕ್ಲಬ್ ಅವರನ್ನು ಸನ್ಮಾನಿಸಿತ್ತು.

ಧರ್ಮ ಸಂಸ್ಥೆಗಳಲ್ಲಿ ಅವರು ಸಲ್ಲಿಸಿರುವ ಸೇವೆ ಅವಿಸ್ಮರಣೀಯ. ಅವರು ಬಾಲ್ಯದಿಂದಲೂ ಧರ್ಮ ಸಂಸ್ಕೃತಿಗಳ ಅಭಿಮಾನಿಗಳಾಗಿದ್ದರಲ್ಲದೆ ಉತ್ತಮ ದಾಸೋಹಿಗಳೂ ಆಗಿದ್ದರು. ಜಂಗಮ ಪ್ರೇಮಿಗಳಾಗಿದ್ದ ಅವರು ಅನೇಕ ಪೀಠಾಧಿಕಾರಿಗಳ ಹಾಗೂ ಮಠಾಧೀಶ್ವರರ ಸೇವೆಯನ್ನು ಸಲ್ಲಿಸಿ ಗುರು ಜಂಗಮರ ಪ್ರೀತಿಗೆ ಪಾತ್ರರಾಗಿದ್ದರು. ಶ್ರೀಶೈಲ, ಕೇದಾರ ಪೀಠಗಳ ಜೀರ್ಣೋದ್ಧಾರ ಕಾರ್ಯವನ್ನು ಸಮಾಜ ಬಾಂಧವರ ಸಹಾಯ ಪಡೆದು ನೆರವೇರಿಸಿದ್ದರು. ಬೆಂಗಳೂರಿನ ಬಸವನಗುಡಿಯ ಬಸವೇಶ್ವರ ದೇವಾಲಯದ ಗೋಪುರವನ್ನು ಮಿತ್ರರ ನೆರವಿನಿಂದ ನೂತನವಾಗಿ ನಿರ್ಮಿಸಿದ ಕೀರ್ತಿಗೆ ಪಾತ್ರರಾಗಿದ್ದರು. ಇಷ್ಟೇ ಅಲ್ಲದೆ ಧರ್ಮ ಸಂಸ್ಥೆಗಳಾದ ಶ್ರೀ ಮಹಂತರ ಮಠ ಟ್ರಸ್ಟ್ ಸಮಿತಿ ಅಧ್ಯಕ್ಷರಾಗಿಯೂ, ಸರ್ಪಭೂಷಣ ಶಿವಯೋಗಿಗಳ ಮಠದ ಟ್ರಸ್ಟ್ ಹಾಗೂ ರಾವ್‌ಬಹದ್ದೂರ್ ತೋಟದಪ್ಪ ಧರ್ಮಸಂಸ್ಥೆಯ ಸದಸ್ಯರೂ ಆಗಿ ಸೇವೆ ಸಲ್ಲಿಸುತ್ತಿದ್ದರು.

ಶ್ರೇಷ್ಠ ವರ್ತಕರಾಗಿದ್ದ ಕೆಂಚಪ್ಪನವರು ಚಿಕ್ಕಪೇಟೆ ವರ್ತಕರ ಸಂಘದ ಅಧ್ಯಕ್ಷರಾಗಿ, ಮೈಸೂರು ಊದುಬತ್ತಿ ತಯಾರಕರ ಸಂಘದ ಸ್ಥಾಪಕ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು.

ಗಳಿಸಿದ ಧನವನ್ನು ತಾವೇ ಭೋಗಿಸಬೇಕೆಂಬ ಆಸೆ ಹೊಂದಿರದವರಾಗಿದ್ದ ಯಜಮಾನ್ ಕೆಂಚಪ್ಪನವರು ಮಠ ಮಾನ್ಯಗಳಿಗೆ, ವಿದ್ಯಾ ಸಂಸ್ಥೆಗಳಿಗೆ ಉದಾರ ದಾನ ನೀಡಿದ್ದಾರಲ್ಲದೆ, ಬೆಂಗಳೂರಿನ ರಾಷ್ಟ್ರೀಯ ವಿದ್ಯಾಸಂಸ್ಥೆ, ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜುಗಳಿಗೆ ತಮ್ಮ ತಂದೆ ತಾಯಿಗಳ ಹೆಸರಿನಲ್ಲಿ ಉದಾರವಾಗಿ ಧನವನ್ನು ಕೊಡುಗೆಯಾಗಿ ನೀಡಿದ್ದಾರೆ.

ತಮ್ಮ ಮಿತ್ರರಾಗಿದ್ದ ಕೈ॥ ಧರ್ಮಪ್ರಕಾಶ್ ಎಸ್. ರುದ್ರಯ್ಯನವರ ಸಹಕಾರದೊಂದಿಗೆ "ವಿಶ್ವ ಕರ್ನಾಟಕ" ದಿನಪತ್ರಿಕೆಯನ್ನು ನಡೆಸಲು ನೆರವಾಗಿದ್ದರು. ಅಲ್ಲದೆ ಅವರು ಅನೇಕ ವೀರಶೈವ ಧರ್ಮಗ್ರಂಥಗಳ ಪ್ರಕಟಣೆಗೆ ಪ್ರೋತ್ಸಾಹ ಹಾಗೂ ಆರ್ಥಿಕ ನೆರವು ನೀಡಿದ್ದಾರೆ.

ಯಜಮಾನ್ ಕೆಂಚಪ್ಪನವರ ಧರ್ಮ ಹಾಗೂ ಸೇವಾಕಾರ್ಯಗಳನ್ನು ಮೆಚ್ಚಿ ವಿಶ್ವ ವೀರಶೈವ ಪರಿಷತ್ತು 78 ರ ಜನವರಿ 15 ರಂದು ರಂಭಾಪುರಿ ಶ್ರೀಗಳ ಅಧ್ಯಕ್ಷತೆಯಲ್ಲಿ ಸನ್ಮಾನಿಸಿ ಭಿನ್ನವತ್ತಳೆಯನ್ನು ಅರ್ಪಿಸಿದೆ.

ವೀರಶೈವ ಸಮಾಜದಲ್ಲಿ ಧ್ರುವತಾರೆಯಂತೆ ಮಿನುಗುತ್ತಿದ್ದ ಯಜಮಾನ್ ಕೆಂಚಪ್ಪನವರು ಇಲ್ಲವಾಗಿರುವುದು ಸಮಾಜಕ್ಕೆ ಅದರಲ್ಲೂ ವೀರಶೈವ ಸಮಾಜಕ್ಕೆ ತುಂಬಲಾರದ ನಷ್ಟ ಉಂಟಾಗಿದೆ.

# ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ
# ತುಮಕೂರು

## ಜಿಲ್ಲೆಯ ಸಮಗ್ರ ಅಭಿವೃದ್ಧಿಯತ್ತ ದಿಟ್ಟ ಹೆಜ್ಜೆ

‡ ಕಡು ಬಡವರನ್ನು ಗುರುತಿಸಿ ಅವರಿಗೆ ಸಾಲ ಸೌಲಭ್ಯವನ್ನು ಒದಗಿಸಿ ಆರ್ಥಿಕ ಸ್ವಾತಂತ್ರ್ಯದ ಕನಸು ನನಸಾಗಿಸುವುದು.

‡ ಗ್ರಾಮೋದ್ಯೋಗ ಮತ್ತು ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ, ಗ್ರಾಮೀಣ ಯುವಕ ಯುವತಿಯರಿಗೆ ವಿವಿಧ ಕೈಗಾರಿಕೆಗಳಲ್ಲಿ ತರಬೇತಿ –ಸ್ವಯಂ ಉದ್ಯೋಗಕ್ಕೆ ಸಹಾಯ

‡ ಕೃಷಿ ಕಾರ್ಮಿಕರಿಗೆ ಉದ್ಯೋಗ ಭರವಸೆ

‡ ಗ್ರಾಮೀಣ ಪ್ರದೇಶಗಳಲ್ಲಿ ಅವಶ್ಯಕ ಸೌಕರ್ಯಗಳ ನಿರ್ಮಾಣ.

‡ ಬರಗಾಲದ ಭೀಕರತೆ ದೂರಗೊಳಿಸಿ ನೈಸರ್ಗಿಕ ಸಮತೋಲನ ಕಾಯು–ವಡೆ ಸತತ ಪ್ರಯತ್ನ

‡ ಗೋಬರ್ ಅನಿಲ ಘಟಕ ಮತ್ತು ಹೊಗೆ ರಹಿತ ಅಸ್ತ್ರ ಒಲೆಗಳಿಗೆ ಪ್ರೋತ್ಸಾಹ ಇಂಧನ ಸಮಸ್ಯೆ ಪರಿಹಾರದಲ್ಲಿ ಸಹಾಯ

‡ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ನೀರಾವರಿ ಸೌಲಭ್ಯ–ತುಂತುರು ಮತ್ತು ಹನಿ ಹನಿ ನೀರಾವರಿ ಕ್ರಮಗಳಿಗೆ ಉತ್ತೇಜನ.

‡ ಹರಿಜನರ ಅಭಿವೃದ್ಧಿಗೆ ವಿಶೇಷ ಆರ್ಥಿಕ ಕಾರ್ಯಕ್ರಮ ಸಾಮೂಹಿಕ ನೀರಾವರಿ ಸಂಘಗಳ ಸ್ಥಾಪನೆ.

‡ ಹಣ್ಣು ಮತ್ತು ಇಂಧನ ಬೆಳೆಗಳಿಗೆ ಪ್ರೋತ್ಸಾಹ.

‡ ಜೀತ ವಿಮುಕ್ತರ ಪುನರ್ವಸತಿ, ಅವರ ಸರ್ವತೋಮುಖ ಅಭಿವೃದ್ಧಿಗೆ ಸಹಾಯ.

‡ ಮಿಶ್ರತಳಿ ಕರು ಮತ್ತು ಕೋಳಿ ಸಾಕಣೆಗೆ ವಿಶೇಷ ಉತ್ತೇಜನ.

**ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗೆ ಭೇಟಿ ನೀಡಿ.**
**ಇಲ್ಲವೆ ಸಮೀಪದ ಕ್ಷೇತ್ರಾಭಿವೃದ್ಧಿ ಅಧಿಕಾರಿಯನ್ನು ಸಂಪರ್ಕಿಸಿ.**

★ "ನಿಮ್ಮ ಸೇವೆಯೇ ನಮ್ಮ ಗುರಿ" ★

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.